KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೮, ೨೦೧೦ (ಚೈತ್ರ ೧೮, ಶಕ ವರ್ಷ ೧೯೩೨) | ಸಂಚಿಕೆ ೧೪ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂ.ಸಿ.ಎ./ಸಿ.ಆರ್–07/ಎಫ್.ಸಿ.2009, ದಿನಾಂಕ:17ನೇ ಮಾರ್ಚ್, 2010**

**ಅರ್ಜಿದಾರರು**

1) ಶ್ರೀಮತಿ ಸುಜಾತ ಜಿ. ಶೆಟ್ಟಿ (43 ವರ್ಷ)
W/o ಶ್ರೀ ಯು. ಗಣೇಶ್‌ಶೆಟ್ಟಿ.
2) ಸೋನಮ್ ಜಿ. ಶೆಟ್ಟಿ (16 ವರ್ಷ)
D/o ಶ್ರೀ ಯು. ಗಣೇಶ್ ಶೆಟ್ಟಿ.
3) ಗೌರವ್ (13 ವರ್ಷ)
S/o ಶ್ರೀ ಯು. ಗಣೇಶ್ ಶೆಟ್ಟಿ,
ವಾಸ: ಕಪ್ಪೆಟ್ಟು ಹೌಸ್, ರಾ.ಹೆ.17, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ.

**ಪ್ರತಿವಾದಿಗಳು**

1) ಶ್ರೀ ಸಂಜಯ್ ನಾಯಕ್ (33 ವರ್ಷ)
ಬಿನ್ ಲೇಟ್ ರಮಾನಂದ ನಾಯಕ್,
ವಾಸ: ರಿಗಲ್ ಹೌಸ್, ಈಶ್ವರ ನಗರ, ಹೆರ್ಗಾ ಗ್ರಾಮ, ಉಡುಪಿ ತಾಲ್ಲೂಕು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸುಜಾತ ಜಿ. ಶೆಟ್ಟಿ ಇವರು ತಮ್ಮ ಗಂಡನಾದ ಯು. ಗಣೇಶ್ ಶೆಟ್ಟಿ ಇವರು 1ನೇ ಪ್ರತಿವಾದಿಯವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:15.05.2009ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಂ. ಆನಂದಮೂರ್ತಿ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್–432

**ಆರ್ಥಿಕ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಆಇ 39 ಸ.ಉ.ಲಾ 2008, ಬೆಂಗಳೂರು, ದಿನಾಂಕ:11ನೇ ಮಾರ್ಚ್, 2010**

**ವಿಷಯ:** ದಿನಾಂಕ:01.01.2008ರಲ್ಲಿದ್ದಂತೆ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಉಪ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:51 ಸಉಲಾ 2006, ದಿನಾಂಕ:13.09.2006.

2) ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯಲಾಟರಿ ಇಲಾಖೆಯ ನಿರ್ದೇಶಕರ ಪತ್ರಸಂಖ್ಯೆ: ಸಉಸಿ(3)13/2001–02, ದಿನಾಂಕ:20.01.2007 ಮತ್ತು 22.02.2008.

3) ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಆಇ 39 ಸಉಲಾ 2008, ದಿನಾಂಕ:09.04.2008.

4) ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಪತ್ರಸಂಖ್ಯೆ:ಸಉಸಿ(3)13/2001–02, ದಿನಾಂಕ:29.05.2008.

ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಉಪ ನಿರ್ದೇಶಕರು ವೃಂದದ ದಿನಾಂಕ:01.01.2006ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಪ್ರಕಟಿಸಲಾಗಿದೆ. ಮೇಲೆ ಉಲ್ಲೇಖ (2)ರ ಪತ್ರದಲ್ಲಿ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ನಿರ್ದೇಶಕರು ಇಲಾಖೆಯ ಉಪ ನಿರ್ದೇಶಕರು ವೃಂದದ ದಿನಾಂಕ:01.01.2008ರಲ್ಲಿದ್ದಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಉಲ್ಲೇಖ (3)ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿ ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಉಪ ನಿರ್ದೇಶಕರು ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ್ದು, ಈ ಕುರಿತು ಆಕ್ಷೇಪಣೆಗಳೇನಾದರೂ ಇದ್ದಲ್ಲಿ 30 ದಿನಗಳ ಒಳಗೆ ಸಲ್ಲಿಸಲು ತಿಳಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ:29.05.2008ರ ನಿರ್ದೇಶಕರ ಪತ್ರದಲ್ಲಿ ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಶ್ರೀ ಎ.ಆರ್. ಸತ್ಯನಾರಾಯಣ, ಉಪ ನಿರ್ದೇಶಕರು (ಲಾಟರಿ), ಇವರು ಆಕ್ಷೇಪಣೆಯನ್ನು ಸಲ್ಲಿಸಿ ಅವರ ಹೆಸರಿನ ಮುಂದೆ ಅರ್ಹತಾ ದಿನಾಂಕದ ಕಾಲಂನಲ್ಲಿ ದಿನಾಂಕ:02.08.2001 ಎಂದು ನಮೂದಿಸಬೇಕೆಂದು ಕೋರಿರುವ ಪತ್ರವನ್ನು ಲಗತ್ತಿಸಿ ಕಳುಹಿಸಿಕೊಡಲಾಗಿದೆ. ಶ್ರೀ ಸತ್ಯನಾರಾಯಣ, ಉಪ ನಿರ್ದೇಶಕರು (ಲಾಟರಿ), ಇವರ ಪೂರ್ವಾನ್ವಯ ಬಡ್ತಿ ನೀಡುವ ಪ್ರಸ್ತಾವನೆಯನ್ನು ಕಡತ ಸಂಖ್ಯೆ: ಆಇ 182 ಸ.ಉ.ಲಾ.2006ರಲ್ಲಿ ಪರಿಶೀಲಿಸಿದ ನಂತರ ಪ್ರಸ್ತಾವನೆಯನ್ನು ತಿರಸ್ಕರಿಸಲಾಗಿದೆ. ಆದುದರಿಂದ ಸದರಿ ಅಧಿಕಾರಿಯವರ ಆಕ್ಷೇಪಣೆಗಳನ್ನು ಪರಿಗಣಿಸಲು ಯೋಗ್ಯವಾಗಿರುವುದಿಲ್ಲವೆಂದು ಸರ್ಕಾರವು ತೀರ್ಮಾನಿಸಿದೆ.

ಆದ್ದರಿಂದ ಬಂಡವಾಳ ಹೂಡಿಕೆ, ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಉಪ ನಿರ್ದೇಶಕರು ವೃಂದದ ದಿನಾಂಕ:01.01.2008ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಕೆಳಗಿನಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಹೆಸರು ಶ್ರೀಯುತರು | ಜನ್ಮ ದಿನಾಂಕ | ಸರ್ಕಾರದ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 1. | ಆರ್. ಬಸವಣ್ಣ | 10.12.1949 | 01.06.1977 | 06.07.1995 | 04.07.1995 | ನಿವೃತ್ತರಾಗಿದ್ದಾರೆ |
| 2. | ಓ. ಬೊಮ್ಮಣ್ಣ | 08.11.1953 | 01.10.1981 | 11.08.1995 | 04.07.1995 | – |
| 3. | ಎ.ಆರ್. ಸತ್ಯನಾರಾಯಣ | 04.09.1952 | 01.10.1981 | 14.06.2006 | 01.06.2006 | – |

**ಡಿ.ಜಿ. ಪಟಗಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು)

ಪಿ.ಆರ್–433

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:379/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು, | | ರಾಘವ ಬಿನ್ ರಂಗಸ್ವಾಮಿ, |
| ಟಿ.ನರಸೀಪುರ ವಲಯ, ಟಿ.ನರಸೀಪುರ | | ಡಿ. ಶ್ರೀನಿವಾಸ್ ಬಿನ್ ದಾಸಪ್ಪ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:31.01.2009ರಂದು ಬೆಳಿಗ್ಗೆ 6.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಟಿ.ನರಸೀಪುರ ವಲಯ, ಟಿ.ನರಸೀಪುರ ಇವರು ಟಿ.ನರಸೀಪುರ ತಾ: ಬನ್ನೂರು ಹೋಬಳಿ, ಮೈಸೂರು– ಬನ್ನೂರು ರಸ್ತೆಗೆ ಸೇರಿರುವ ರಂಗಸಮುದ್ರದ ಬಸ್ ನಿಲ್ದಾಣದ ಹತ್ತಿರ ಕೆಎ–55/ಇ–7823 ನೋಂದಣಿ ಸಂಖ್ಯೆಯ ಬಜಾಜ್ ಪಲ್ಸರ್ ವಾಹನದಲ್ಲಿ ಅಕ್ರಮವಾಗಿ 8.640 ಲೀ.ನಕಲಿ ಮದ್ಯ, ಲೇಬಲ್‌ಗಳು ಮತ್ತು ಮುಚ್ಚಳಗಳನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ, ನಕಲಿ ಮದ್ಯ ಮತ್ತು ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು ಜಪ್ತುಪಡಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:21/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ) ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ರಾಘವ ಮತ್ತು ಡಿ. ಶ್ರೀನಿವಾಸ ಎಂಬ ಆರೋಪಿಗಳನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಾಗಿ ಹಾಗೂ ಉಳಿದ ಆರೋಪಿಗಳನ್ನು ಪತ್ತೆಹಚ್ಚಿ ದಸ್ತಗಿರಿ ಮಾಡುವುದಾಗಿ ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕ್ರಮವಾಗಿ ದಿನಾಂಕ:12.02.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಈ ಸಂಬಂಧ ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ದೊರೆತ್ತಿರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:31.01.2009ರಂದು ಟಿ.ನರಸೀಪುರ ತಾ: ಬನ್ನೂರು ಹೋಬಳಿ, ಮೈಸೂರು– ಬನ್ನೂರು ರಸ್ತೆಗೆ ಸೇರಿರುವ ರಂಗಸಮುದ್ರದ ಬಸ್ ನಿಲ್ದಾಣದ ಹತ್ತಿರ ಕೆಎ–55/ಇ–7823 ನೋಂದಣಿ ಸಂಖ್ಯೆಯ ಬಜಾಜ್ ಪಲ್ಸರ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ನಕಲಿ ಮದ್ಯ, ಲೇಬಲ್‌ಗಳು ಮತ್ತು ಮುಚ್ಚಳಗಳನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದದ್ದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ) 43ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಅಲ್ಲದೇ ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ/ ದಾಸ್ತಾನು ಮತ್ತು ಮಾರಾಟದಂತಹ ವೃತ್ತಿಯಲ್ಲಿ ತೊಡಗಿಕೊಂಡು, ಸಾರ್ವಜನಿಕರ ಪ್ರಾಣಹಾನಿ ಮತ್ತು ನೆಮ್ಮದಿಗೆ ಭಂಗ ತರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಆದ ಕಾರಣ ಈ ಕೃತ್ಯ ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (8) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:379/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ಟಿ.ನರಸೀಪುರ ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:21/2008–09, ದಿನಾಂಕ:31.01.2009ರಂದು ವಶಪಡಿಸಿಕೊಂಡ ಕೆಎ–55/ಇ–7823 ನೋಂದಣಿ ಸಂಖ್ಯೆಯ ಬಜಾಜ್ ಪಲ್ಸರ್ ವಾಹನವನ್ನು (ನಕಲಿ ಮದ್ಯ ಮತ್ತು ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು ಮಾದರಿಯನ್ನು ಹೊರತುಪಡಿಸಿ ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1209

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:20/2005–06, ದಿನಾಂಕ:24ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು ಪಟ್ಟಣ ಪೊಲೀಸ್ ಠಾಣೆ, ನಂಜನಗೂಡು. | | ಮಹದೇವಸ್ವಾಮಿ ಬಿನ್ ಜವರಶೆಟ್ಟಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:07.05.2005 ರಂದು ಬೆಳಿಗ್ಗೆ 11.00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಪಟ್ಟಣ ಪೊಲೀಸ್ ಠಾಣೆ, ನಂಜನಗೂಡು ಇವರು ನಂಜನಗೂಡು ಟೌನ್, ಹುಲ್ಲಹಳ್ಳಿ ಸರ್ಕಲ್‌ನಲ್ಲಿ ಕೆಎ–09/4803 ನೋಂದಣಿ ಸಂಖ್ಯೆಯ ಆಟೋ ವಾಹನದಲ್ಲಿ ಅಕ್ರಮವಾಗಿ 100 ಲೀ. ಸೇಂದಿಯನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:33/2005ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34 ಹಾಗೂ ಐ.ಪಿ.ಸಿ. ಸೆಕ್ಷನ್ ರೀತ್ಯಾ ಮೊಕದ್ದಮೆ ದಾಖಲು ಮಾಡಿ, ಮುಂದಿನ ಕ್ರಮಕ್ಕಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಅಬಕಾರಿ ವಸ್ತುಗಳನ್ನು ಅಬಕಾರಿ ಸಬ್ ಇನ್ಸ್‌ಪೆಕ್ಟರ್, ನಂಜನಗೂಡು ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ಆರೋಪಿಗಳಾದ ಮಹದೇವ, ಮಕ್ಬುಲ್ ಮತ್ತು ಶಿವಣ್ಣ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:08.09.2005ರಂದು ಕಾರಣ ಕೇಳುವ ನೋಟೀಸ್‌ನ್ನು ನೀಡಲಾಗಿದ್ದು, ಮಹದೇವ ಬಿನ್ ಜವರಶೆಟ್ಟಿ ವಿಳಾಸದಾರರು ಪೌತಿಯಾಗಿರುತ್ತಾರೆ ಎಂದು ಅಂಚೆ ಇಲಾಖೆಯವರು ಸದರಿ ನೋಟೀಸ್‌ನ್ನು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:08.09.2005ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ.

ಮಹಾದೇವ ಬಿನ್ ಜವರಶೆಟ್ಟಿ ಮತ್ತು ಶಿವಣ್ಣ ಬಿನ್ ತಮ್ಮಯ್ಯ, ಎನ್.ಜಿ.ಓ. ಕಾಲೋನಿ, ಚಾಮಲಾಪುರದಹುಂಡಿ, ನಂಜನಗೂಡು ತಾಲ್ಲೂಕು ಇವರುಗಳು ಕಾರಣ ಕೇಳುವ ನೋಟೀಸಿಗೆ ಪ್ರತಿಕ್ರಿಯಿಸಿ, ದಿನಾಂಕ:24.09.2008ರಂದು ಈ ಪ್ರಾಧಿಕಾರಕ್ಕೆ ಲಿಖಿತ ಮೂಲಕ ಮನವಿಯನ್ನು ಸಲ್ಲಿಸಿ, ಆರೋಪವನ್ನು ಅಲ್ಲಗಳೆದು ವಾಹನವನ್ನು ತನ್ನ ವಶಕ್ಕೆ ಬಿಡುಗಡೆ ಮಾಡಲು ಕೋರಿರುತ್ತಾರೆ. ಈ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಲಾಗಿದ್ದು, ಅರ್ಜಿದಾರರ ಮನವಿಯನ್ನು ಪುರಸ್ಕರಿಸಿ, ರೂ.5000/–ಗಳ ಭದ್ರತೆಯನ್ನು ಹಾಜರುಪಡಿಸುವಂತೆ ಸೂಚಿಸಲಾಗಿತ್ತು. ಇದಕ್ಕೆ ಅರ್ಜಿದಾರರು ಒಪ್ಪಿಗೆ ಸೂಚಿಸಲಾಗಿದ್ದು,

ಇದುವರೆವಿಗೂ ಯಾವುದೇ ಭದ್ರತೆಯನ್ನು ಹಾಜರುಪಡಿಸಿರುವುದಿಲ್ಲ. ಅಲ್ಲದೆ ಈ ಪ್ರಕರಣದ ಮುಟ್ಟುಗೋಲು ನಡವಳಿಗಳಿಗೆ ಅರ್ಜಿದಾರರು ದಿನಾಂಕ:11.01.2007ರ ವರೆಗೆ ಹಾಜರಾಗಿರುವುದನ್ನು ಹೊರತುಪಡಿಸಿ, ಉಳಿದ ಯಾವುದೇ ನಡವಳಿಗಳಿಗೆ ಹಾಜರಾಗಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಯಾವುದೇ ಸಾಕ್ಷ್ಯ ಪುರಾವೆಗಳನ್ನು ಹಾಜರುಪಡಿಸಿರುವುದಿಲ್ಲ. ಈ ಕೃತ್ಯ ತನ್ನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ, ಅಲ್ಲದೇ ಇದುವರೆವಿಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (4) ವರ್ಷಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:20/2005-06, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಪಟ್ಟಣ ಪೊಲೀಸ್ ಠಾಣೆ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 33/2005, ದಿನಾಂಕ:07.05.05.ರಂದು ವಶಪಡಿಸಿಕೊಂಡ ಕೆಎ-09/4803/ ನೋಂದಣಿ ಸಂಖ್ಯೆಯ ಆಟೋ ವಾಹನ ಮತ್ತು 100 ಲೀ. ಸೇಂದಿಯನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್-1226

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:40(ಪೊಲೀಸ್)/2008-09, ದಿನಾಂಕ:24ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ನಂಜನಗೂಡು ತಾ: | | ಪುರುಷೋತ್ತಮ ಬಿನ್ ಪುಟ್ಟಸೋಮಯ್ಯ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:31.12.2008ರಂದು ಸಂಜೆ 4.45 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ ಇವರು ನಂಜನಗೂಡು ತಾಲ್ಲೂಕು, ಕಲ್ಲಹಳ್ಳಿ ರಸ್ತೆ ಕೈಗಾರಿಕಾ ಪ್ರದೇಶದ ಶ್ರೀ ವೆಂಕಟೇಶ್ವರ ಎಂಟರ್‌ಪ್ರೈಸಸ್ ಕಾರ್ಖಾನೆಯ ಮುಂಭಾಗದಲ್ಲಿ ಕೆಎ-04-/ಎಕ್ಸ್-4379 ನೋಂದಣಿ ಸಂಖ್ಯೆಯ ಕೈನೆಟಿಕ್ ಹೋಂಡಾ

ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪುರುಷೋತ್ತಮ ಬಿನ್ ಪುಟ್ಟಸೋಮಯ್ಯ ಎಂಬುವವರನ್ನು ದಸ್ತಗಿರಿ ಮಾಡಿ ಪ್ರಥಮ ಮಾಹಿತಿ ವರದಿ ಸಂಖ್ಯೆ:406/2008ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕೆ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:02.01.2009ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:07.01.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ಉತ್ತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:22.05.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಅಂತೆಯೇ ದಿನಾಂಕ:23.07.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು 'ಬಿ' ವಹಿಯ ಪ್ರತಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ರಾಘವೇಂದ್ರ ಎಂ. ದೇಶ್‌ಪಾಂಡೆ ಬಿನ್ ಮಾಧವ ದೇಶ್‌ಪಾಂಡೆ, ಸಂಖ್ಯೆ: ಬಿ–1518/5, ಬಿ ಬ್ಲಾಕ್, 5ನೇ ಮೈನ್, 5ನೇ ಕ್ರಾಸ್, ಸಹಕಾರನಗರ, ಬೆಂಗಳೂರು–ಇವರ ಒಡೆತನದಲ್ಲಿರುವುದು ಕಂಡುಬಂದಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:31.12.2008ರಂದು ನಂಜನಗೂಡು ತಾಲ್ಲೂಕು ಕಲ್ಲಹಳ್ಳಿ ರಸ್ತೆ, ಕೈಗಾರಿಕಾ ಪ್ರದೇಶದಲ್ಲಿ ಕೆಎ–04–/ಎಕ್ಸ್–4379 ನೋಂದಣಿ ಸಂಖ್ಯೆಯ ಕೈನೆಟಿಕ್ ಹೋಂಡಾ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (8) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:40(ಪೊಲೀಸ್)/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:406/2008, ದಿನಾಂಕ:31.12.2008ರಂದು ವಶಪಡಿಸಿಕೊಂಡ ಕೆಎ–04/ಎಕ್ಸ್–4379 ನೋಂದಣಿ ಸಂಖ್ಯೆಯ ಕೈನೆಟಿಕ್ ಹೋಂಡಾ ವಾಹನವನ್ನು (8.640 ಲೀ. ಮದ್ಯವನ್ನು ಮಾದರಿಯನ್ನು ಹೊರತುಪಡಿಸಿ, ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ|| ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1229

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:322/2007–08, ದಿನಾಂಕ:24ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಮೈಸೂರು. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:18.02.2008ರಂದು ಬೆಳಿಗ್ಗೆ 9.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಮೈಸೂರು ವಿಭಾಗ ಇವರು ನಂಜನಗೂಡು ತಾಲ್ಲೂಕು, ನಂಜನಗೂಡು–ಗುಂಡ್ಲುಪೇಟೆ ರಸ್ತೆ, ಕಳ್ಳೀಪುರ ಗ್ರಾಮದ ಗೇಟ್ ಬಳಿ ಕೆಎ–09/ಎಂ–2405 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 105 ಲೀ. ಮದ್ಯಸಾರವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:16/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 33(ಬಿ), 38(ಎ) ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿ ಪರಾರಿಯಾಗಿರುವುದಾಗಿ ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:28.07.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ:05.11.2008ರಂದು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಮತ್ತೊಮ್ಮೆ ಪತ್ರ ಬರೆಯಲಾಗಿರುತ್ತದೆ. ಶ್ರೀಮತಿ ಪ್ರಭಾ ಆರ್. ರೆಡ್ಡಿ, ಸಂ.175, 1ನೇ ಬ್ಲಾಕ್, ಕುವೆಂಪುನಗರ, ಮೈಸೂರು ಇವರ ಒಡೆತನದಲ್ಲಿದ್ದು, ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:11.07.2008ರಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ಜಾರಿಗೊಳಿಸಲಾಗಿದ್ದು, ವಲಯದ ನಿರೀಕ್ಷಕರು ಮಾಲೀಕರಿಗೆ ಜಾರಿಗೊಳಿಸಿ ವರದಿ ಮಾಡಿರುತ್ತಾರೆ. ಸದರಿ ನೋಟೀಸಿಗೆ ಪ್ರತಿಕ್ರಿಯಿಸಿ, ಜಪ್ತುಗೊಳಿಸಲಾದ ಕಾರು ನನ್ನದಾಗಿದ್ದು, ನನಗೆ ಗೊತ್ತಿಲ್ಲದೇ ಕಾರಿನ ಚಾಲಕನು ಹಣದ ಆಸೆಯಿಂದ ಈ ರೀತಿ ತಪ್ಪು ಮಾಡಿರುವುದಾಗಿ, ಇಲಾಖೆಯು ವಿಧಿಸುವ ಮೌಲ್ಯವನ್ನು ಸರ್ಕಾರಕ್ಕೆ ಪಾವತಿಸಲು ಬದ್ಧನಾಗಿರುವುದಾಗಿ ಸದರಿ ವಾಹನವನ್ನು ವಾಪಸ್ಸು ನೀಡಬೇಕೆಂದು ಕೋರಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:18.02.2008ರಂದು ನಂಜನಗೂಡು ತಾಲ್ಲೂಕು, ನಂಜನಗೂಡು–ಗುಂಡ್ಲುಪೇಟೆ ರಸ್ತೆ, ಕಳ್ಳೀಪುರ ಗ್ರಾಮದ ಗೇಟ್ ಬಳಿ ಕೆಎ–09/ಎಂ–2405 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 105 ಲೀ. ಮದ್ಯಸಾರವನ್ನು ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು, ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (19) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ವಾಹನ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿರುವುದನ್ನು ಹೊರತುಪಡಿಸಿ, ಇನ್ನಾವುದೇ ಪ್ರಯತ್ನ ನಡೆಸಿರುವುದು ಕಂಡುಬಂದಿರುವುದಿಲ್ಲ. ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ

ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:322/2007–08, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ಗುಪ್ತವಾರ್ತಾ ವಿಭಾಗ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 16/2007–08, ದಿನಾಂಕ:18.02.2008ರಂದು ವಶಪಡಿಸಿಕೊಂಡ ಕೆಎ–09/ಎಂ–2405 ನೋಂದಣಿ ಸಂಖ್ಯೆಯ ಮಾರುತಿ–800 ವಾಹನವನ್ನು (105 ಲೀ. ಮದ್ಯಸಾರವನ್ನು ಮಾದರಿಯನ್ನು ಹೊರತುಪಡಿಸಿ ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1210

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:564(ಪೊಲೀಸ್)/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ನಂಜನಗೂಡು ಟೌನ್ ಪೊಲೀಸ್ ಠಾಣೆ,<br>ನಂಜನಗೂಡು. | | ಗುರುಸ್ವಾಮಿ ಬಿನ್ ಲೇಟ್ ನಂಜುಂಡಾಚಾರಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.04.2009ರಂದು ಮಧ್ಯಾಹ್ನ 3.30 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ನಂಜನಗೂಡು ಟೌನ್ ಪೊಲೀಸ್ ಠಾಣೆ, ನಂಜನಗೂಡು ಇವರು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಸರ್ಕಲ್ ಬಳಿ ಕೆಎ–05/ಇಎ–457 ನೋಂದಣಿ ಸಂಖ್ಯೆಯ ಬಜಾಜ್ ಕ್ಯಾಲಿಬರ್ ವಾಹನದಲ್ಲಿ ಅಕ್ರಮವಾಗಿ 7.200 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಗುರುಸ್ವಾಮಿ ಬಿನ್ ಲೇಟ್ ನಂಜುಂಡಾಚಾರಿ ಎಂಬುವವರನ್ನು ದಸ್ತಗಿರಿ ಮಾಡಿ ಪ್ರಥಮ ಮಾಹಿತಿ ವರದಿ ಸಂಖ್ಯೆ:65/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:16.04.2009ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:17.04.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ದಕ್ಷಿಣ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:17.04.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದೂವರೆಗೆ ಯಾವುದೇ ಪ್ರತಿಕ್ರಿಯೆ ದೊರೆತಿರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:10.04.2009ರಂದು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಸರ್ಕಲ್ ಬಳಿ ಕೆಎ–05/ಇಎ–457 ನೋಂದಣಿ ಸಂಖ್ಯೆಯ ಬಜಾಜ್ ಕ್ಯಾಲಿಬರ್ ವಾಹನದಲ್ಲಿ ಅಕ್ರಮವಾಗಿ 7.200 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:564/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಂಜನಗೂಡು ಟೌನ್ ಪೊಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:65/2009, ದಿನಾಂಕ:10.04.2009ರಂದು ವಶಪಡಿಸಿಕೊಂಡ ಕೆಎ–05/ಇಎ–457 ನೋಂದಣಿ ಸಂಖ್ಯೆಯ ಬಜಾಜ್ ಕ್ಯಾಲಿಬರ್ ವಾಹನವನ್ನು (7.200 ಲೀ. ಮದ್ಯವನ್ನು ಮಾದರಿಯನ್ನು ಹೊರತುಪಡಿಸಿ, ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1212

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:503(ಪೊಲೀಸ್)/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಹುಲ್ಲಹಳ್ಳಿ ಪೊಲೀಸ್ ಠಾಣೆ,<br>ನಂಜನಗೂಡು ತಾಲ್ಲೂಕು. | | ಸಂದೇಶ್ ಕುಮಾರ್ ಮತ್ತು ಮಹಾಲಿಂಗಸ್ವಾಮಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:09.03.2009ರಂದು ಸಂಜೆ 5.30 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಹುಲ್ಲಹಳ್ಳಿ ಪೋಲೀಸ್ ಠಾಣೆ, ನಂಜನಗೂಡು ಇವರು ನಂಜನಗೂಡು ತಾಲ್ಲೂಕು, ಹರದನಹಳ್ಳಿ ಗ್ರಾಮದ ಬಸ್ ನಿಲ್ದಾಣ ಬಳಿ ಕೆಎ–09/ಎಲ್–2109 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಮೊಪೆಡ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಸಂದೇಶ್‌ಕುಮಾರ್ ಬಿನ್ ಸಿದ್ದರಾಜು ಮತ್ತು ಮಹಾಲಿಂಗಸ್ವಾಮಿ ಬಿನ್ ಮರಿಯಯ್ಯ ಎಂಬುವವರನ್ನು ದಸ್ತಗಿರಿ ಮಾಡಿ ಪ್ರಥಮ ಮಾಹಿತಿ ವರದಿ ಸಂಖ್ಯೆ:35/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:10.03.2009ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:16.03.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:20.03.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಅಂತೆಯೇ ದಿನಾಂಕ:03.06.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಪಡೆದು ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಶ್ರೀ ಪಿ. ಮುತ್ತು ಬಿನ್ ಪಿ. ಮುತ್ತುಸ್ವಾಮಿ, ಸಂ.2542, 4ನೇ ಕ್ರಾಸ್, ನ್ಯೂ ಕಾಂತರಾಜ ಅರಸ್ ರಸ್ತೆ, ಕೆ.ಜಿ. ಕೊಪ್ಪಲು, ಮೈಸೂರು ಇವರ ಒಡೆತನದಲ್ಲಿರುವುದು ಕಂಡುಬಂದಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:09.03.2009ರಂದು ನಂಜನಗೂಡು ತಾಲ್ಲೂಕು, ಹರದನಹಳ್ಳಿ ಗ್ರಾಮದ ಬಸ್ ನಿಲ್ದಾಣ ಬಳಿ ಕೆಎ–09/ಎಲ್–2109 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಮೊಪೆಡ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಶ್ರೀ ಪಿ. ಮುತ್ತು ಬಿನ್ ಪಿ. ಮುತ್ತುಸ್ವಾಮಿ, ಸಂ.2542, 4ನೇ ಕ್ರಾಸ್, ನ್ಯೂ ಕಾಂತರಾಜ ಅರಸ್ ರಸ್ತೆ, ಕೆ.ಜಿ.ಕೊಪ್ಪಲು, ಮೈಸೂರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (6) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:503/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಹುಲ್ಲಹಳ್ಳಿ ಪೋಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:35/2009, ದಿನಾಂಕ:09.03.2009ರಂದು ವಶಪಡಿಸಿಕೊಂಡ ಕೆಎ–09/ಎಲ್–2109 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಮೊಪೆಡ್ ವಾಹನವನ್ನು (8.640 ಲೀ. ಮದ್ಯವನ್ನು ಮಾದರಿಯನ್ನು ಹೊರತುಪಡಿಸಿ, ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1211

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:502(ಪೊಲೀಸ್)/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಟಿ.ನರಸೀಪುರ ಪೊಲೀಸ್ ಠಾಣೆ,<br>ಟಿ.ನರಸೀಪುರ ತಾಲ್ಲೂಕು. | | ರವಿ ಬಿನ್ ಮಾದನಾಯ್ಕ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14.02.2009ರಂದು ಮಧ್ಯಾಹ್ನ 3.00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಟಿ.ನರಸೀಪುರ ಪೊಲೀಸ್ ಠಾಣೆ ಇವರು ಟಿ.ನರಸೀಪುರ ತಾಲ್ಲೂಕು, ತಲಕಾಡು ರಸ್ತೆಯ ಫೈರ್ ಬ್ರಿಗೇಡ್ ಬಳಿ ಕೆಎ–09/ಇಜೆ–4152 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನದಲ್ಲಿ ಅಕ್ರಮವಾಗಿ 18 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ರವಿ ಬಿನ್ ಮಾದನಾಯ್ಕ ಎಂಬುವವರನ್ನು ದಸ್ತಗಿರಿ ಮಾಡಿ ಪ್ರಥಮ ಮಾಹಿತಿ ವರದಿ ಸಂಖ್ಯೆ:27/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕಾಗಿ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:09.03.2009ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:12.03.2009ರಂದು ಟಿ.ನರಸೀಪುರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:18.06.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದೂವರೆಗೆ ಯಾವುದೇ ಪ್ರತಿಕ್ರಿಯೆ ದೊರೆತಿರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:14.02.2009ರಂದು ಟಿ.ನರಸೀಪುರ ತಾಲ್ಲೂಕು, ತಲಕಾಡು ರಸ್ತೆಯ ಬಳಿ ಕೆಎ–09/ಇಜೆ–4152 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನದಲ್ಲಿ ಅಕ್ರಮವಾಗಿ 18 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (7) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ

ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:502/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಟಿ.ನರಸೀಪುರ ಪೊಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:27/2009, ದಿನಾಂಕ:14.02.2009ರಂದು ವಶಪಡಿಸಿಕೊಂಡ ಕೆಎ–09/ಇಜೆ–4152 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನವನ್ನು (18 ಲೀ. ಮದ್ಯವನ್ನು ಮಾದರಿಯನ್ನು ಹೊರತುಪಡಿಸಿ, ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1208

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:563/2008–09, ದಿನಾಂಕ:24ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಇಲವಾಲ ಪೊಲೀಸ್ ಠಾಣೆ,<br>ಮೈಸೂರು. | | ಆರೋಪಿಯನ್ನು ಪತ್ತೆ ಹಚ್ಚಬೇಕಾಗಿರುತ್ತದೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28.03.2009ರಂದು ಸಂಜೆ 5.30 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಇಲವಾಲ ಪೊಲೀಸ್ ಠಾಣೆ, ಮೈಸೂರು ಇವರು ಇಲವಾಲ ಹೋಬಳಿ, ಸೀಗಳ್ಳಿ–ಬಿಳಿಕೆರೆ ರಸ್ತೆ, ಸಿಳ್ಳೇಗೌಡರ ಜಾಗದ ಹತ್ತಿರ, ಕೆಎ–09/ಇಎಲ್–5227 ನೋಂದಣಿ ಸಂಖ್ಯೆಯ ಬಜಾಜ್ ಪ್ಲಾಟಿನಾ ವಾಹನದಲ್ಲಿ ಅಕ್ರಮವಾಗಿ 5.400 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:42/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕೆ ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:09.04.2009ರಂದು ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:16.04.2009ರಂದು ಮೈಸೂರು ವಲಯ ಸಂ.3 ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:16.04.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದೂವರೆಗೆ ಯಾವುದೇ ಮಾಹಿತಿ ಇರುವುದಿಲ್ಲ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:28.03.2009ರಂದು ಇಲವಾಲ ಹೋಬಳಿ, ಸೀಗಳ್ಳಿ–ಬಿಳಿಕೆರೆ ರಸ್ತೆ, ಸಿಳ್ಳೇಗೌಡರ ಜಾಗದ ಹತ್ತಿರ, ಕೆಎ–09/ಇಎಲ್–5227 ನೋಂದಣಿ ಸಂಖ್ಯೆಯ ಬಜಾಜ್ ಪ್ಲಾಟಿನಾ ವಾಹನದಲ್ಲಿ ಅಕ್ರಮವಾಗಿ 5.400 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 34, 38ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದೂವರೆವಿಗೂ ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಲ್ಲೇ ನಡೆದಿದೆ ಎಂಬುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು, ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (6) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಫ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:563/2008–09, ದಿನಾಂಕ:24ನೇ ಸೆಪ್ಟೆಂಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಇಲವಾಲ ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:42/2009, ದಿನಾಂಕ:28.03.2009ರಂದು ವಶಪಡಿಸಿಕೊಂಡ ಕೆಎ–09/ಇಎಲ್–5227 ನೋಂದಣಿ ಸಂಖ್ಯೆಯ ಬಜಾಜ್ ಪ್ಲಾಟಿನಾ ವಾಹನವನ್ನು (5.400 ಲೀ. ಮದ್ಯವನ್ನು ಮಾದರಿಯನ್ನು ಹೊರತುಪಡಿಸಿ, ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಸೆಪ್ಟೆಂಬರ್ ತಿಂಗಳ 24ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1077

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:03/2009–10, ದಿನಾಂಕ:22ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ದ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ. | | ಎಂ. ನಾಗರಾಜು ಬಿನ್ ಮಾದೇಗೌಡ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28.06.2009ರಂದು ಸಂಜೆ 5.00 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರು ನಂಜನಗೂಡು–ಊಟಿ ರಸ್ತೆಯಲ್ಲಿರುವ ಕಾರ್ಮೆಲ್ ಶಾಲೆ ಮುಂಭಾಗ ಬಳಿ ಅಕ್ರಮವಾಗಿ 10.620 ಲೀ. ಮದ್ಯವನ್ನು ಕೆಎ–09/ಎಕ್ಸ್–3589 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:19/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಆರೋಪಿಯನ್ನು ನ್ಯಾಯಾಂಗದ ಮುಂದೆ ಹಾಜರುಪಡಿಸಿರುವುದಾಗಿ ನಮೂದಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:01.07.2009ರಂದು ವರದಿಯೊಂದನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:13.07.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು ದಿನಾಂಕ:07.08.2009ರಂದು ವರದಿಯನ್ನು ಸಲ್ಲಿಸಿ ಮೈಸೂರು ಪಶ್ಚಿಮ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಸದರಿ ವಾಹನದ 'ಬಿ' ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಸಂಬಂಧಪಟ್ಟ ವಾಹನ ಮಾಲೀಕರಿಗೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲು ಕೋರಿರುತ್ತಾರೆ. ಬಿ ವಹಿಯನ್ನು ಪರಿಶೀಲಿಸಲಾಗಿ ಶ್ರೀಮತಿ ಆರ್. ಭುವನೇಶ್ವರಿ ಕೋಂ ವಿ. ರವಿಚಂದ್ರನ್, ನಂ. ಬಿ66, ಬಿ.ಆರ್.ಬಿ.ಎನ್. ನೋಟ್ ಮುದ್ರಣ್ ನಗರ್, ಮೈಸೂರು ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿ ಮಾಲೀಕರಿಗೆ ಕಲಂ 43(ಬಿ) ರ ಅಡಿಯಲ್ಲಿ ಈ ಪ್ರಾಧಿಕಾರದಿಂದ ದಿನಾಂಕ:24.09.2009 ರಂದು ಕಾರಣ ಕೇಳುವ ನೋಟಿಸ್‌ನ್ನು ಜಾರಿಗೊಳಿಸಲಾಗಿದ್ದು, ಆರ್. ಭುವನೇಶ್ವರಿ ಇವರು ಸದರಿ ನೋಟಿಸಿಗೆ ಪ್ರತಿಕ್ರಿಯಿಸಿ, ವಾಹನವನ್ನು ನಾಗೇಶ್ ಬಿನ್ ಲೇ: ಮರಿಬಸವಯ್ಯ ಇವರಿಗೆ ಮಾರಾಟ ಮಾಡಿರುವುದಾಗಿ ಮುಂದಿನ ಪತ್ರ ವ್ಯವಹಾರವನ್ನು ನಾಗೇಶ್‌ರವರಿಗೆ ನಡೆಸಲು ಕೋರಿರುತ್ತಾರೆ. ಹಾಗೆಯೇ ನಾಗೇಶ್‌ರವರು ದಿನಾಂಕ:20.10.2009ರಂದು ಲಿಖಿತ ಮೂಲಕ ಈ ಪ್ರಾಧಿಕಾರಕ್ಕೆ ಮನವಿಯನ್ನು ಸಲ್ಲಿಸಿ, ಎಂ. ನಾಗರಾಜು ಬಿನ್ ಮಾದೇಗೌಡ, ಹೊರೆಯಾಲ ಗ್ರಾಮ, ಗುಂಡ್ಲುಪೇಟೆ ತಾಲ್ಲೂಕು ಇವರಿಗೆ ಮಾರಾಟ ಮಾಡಲಾಗಿದ್ದು ನನಗೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿರುತ್ತಾರೆ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:28.06.2009ರಂದು ನಂಜನಗೂಡು–ಊಟಿ ರಸ್ತೆಯಲ್ಲಿರುವ ಕಾರ್ಮೆಲ್ ಶಾಲೆ ಮುಂಭಾಗ ಬಳಿ ಅಕ್ರಮವಾಗಿ 10.620 ಲೀ. ಮದ್ಯವನ್ನು ಕೆಎ–09/ಎಕ್ಸ್–3589 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ವಾಹನ ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ಪ್ರಸ್ತುತ ಎಂ. ನಾಗರಾಜು ರವರು ಸಹ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:03/2009–10, ದಿನಾಂಕ:22ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:19/2009, ದಿನಾಂಕ:28.06.2009ರಂದು ವಶಪಡಿಸಿಕೊಂಡ ಕೆಎ–09/ಎಕ್ಸ್–3589

ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ವಾಹನವನ್ನು (10.620 ಲೀ. ಮದ್ಯವನ್ನು ಮಾದರಿಯನ್ನು ಹೊರತುಪಡಿಸಿ, ಈಗಾಗಲೇ ಪ್ರತ್ಯೇಕ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 22ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1204

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ ನಂ.5 ಲೋ.ಬಂ ಮತ್ತು ಒ.ಜ.ಸಾ.ಉಪ ವಿಭಾಗ ಸಾಗರ**

**"ಸುತ್ತೋಲೆ"**

**ನಂ:ಸಕಾಇಂ:ಲೋಇ:ಸಿಬ್ಬಂದಿ–1 :ಮಾಹಿತಿ ಹಕ್ಕು ಕೈಪಿಡಿ: 2005/2009–10/765, ದಿನಾಂಕ: 25ನೇ ಮಾರ್ಚ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ :ಲೋಇ:64:ಸ್ವೀಮರ:05 ದಿನಾಂಕ:–23–09–2005 ಹಾಗೂ ಲೋಇ.16–ಐಟಿಸಿ:08:2750 ದಿನಾಂಕ:25–02–08 ಮತ್ತು ಮುಖ್ಯ ಇಂಜಿನಿಯರು (ಸಂಕದ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ : ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ :05:ಇಎಸ್ಎಫ್:05–06 ದಿ. 19–09–2005 ಹಾಗೂ ಮುಖ್ಯ ಇಂಜಿನಿಯರ್ ಸಂಕದ ಬೆಂಗಳೂರು ಸಿಬಿಎಸ್:ಮಹಾಕ:208:07–08 ದಿ:20–03–08 ರ ಪರಿಷ್ಕೃತ ನಿರ್ದೇಶನದಂತೆ 2005 ರ ಮಾಹಿತಿ ಹಕ್ಕು ಅಧಿನಿಯಮ–2ರ ಅಡಿಯಲ್ಲಿ ಲೋ.ಇ. ಮುಖ್ಯಸ್ಥರನ್ನು ಸಾರ್ವಜನಿಕ ಪ್ರಾಧಿಕಾರಿ ಎಂದು ನಾಮಾಂಕಿತ ಮಾಡಿ ಸರ್ಕಾರವು ನೇಮಿಸಿದೆ.

ಮಾಹಿತಿ ಹಕ್ಕು ಅಧಿನಿಯಮ 2005 ರ ಸಕ್ಷನ್ 5(2) ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯ ವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಇಲಾಖಾ ಮುಖ್ಯಸ್ಥರು ಎಲ್ಲಾ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ಮತ್ತು ಸದರಿ ನಿಯಮ 5(1)ರ ಅಡಿಯಲ್ಲಿ ಕಾರ್ಯಪಾಲಕ ಇಂಜಿನಿಯರುಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಿರುತ್ತಾರೆ

ಈ ಸಂಬಂಧ ಲೋಕೋಪಯೋಗಿ ಇಲಾಖೆ, ಸಾಗರ ಉಪವಿಭಾಗ ವ್ಯಾಪ್ತಿಗೆ ಸಂಬಂಧಿಸಿದಂತೆ, ಉಪವಿಭಾಗ ಕಛೇರಿಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರನ್ನು "ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ" (ಎಸ್.ಪಿ.ಐ.ಓ) ಎಂದು ಕಛೇರಿಯ ಸಹಾಯಕ ಇಂಜಿನಿಯರ್ ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ) ಎಂದು ಈ ಮೂಲಕ ನಾಮಾಂಕಿತ ಮಾಡಲಾಗಿದೆ. ಈ ಬಗ್ಗೆ ಈ ಕಛೇರಿಯಿಂದ "ಮಾಹಿತಿ ಹಕ್ಕು ಕೈಪಿಡಿ–2005" ನ್ನು ಪ್ರಕಟಿಸಲಾಗಿದ್ದು, ವೆಬ್ ಸೈಟ್‌ನಲ್ಲಿ ಪ್ರಚುರಪಡಿಸುವಂತೆ ಡಿಪಿಸಿ/ಎನ್‌ಪಿಸಿ ಇವರಿಗೆ ಸೂಚಿಸಲಾಗಿದೆ. ಸಾಗರ ಲೋ.ಇ ಉಪ ವಿಭಾಗ ಕಛೇರಿಯಿಂದ ಮಾಹಿತಿಯನ್ನು ಈ ಮೂಲಕ ಪರಿಷ್ಕರಿಸಿ ಪ್ರಕಟಿಸಿದೆ.

**ಕೆ.ಎನ್. ದಿನೇಶ್**
ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ.ಬಂ ಮತ್ತು ಒ.ಜ.ಸಾ. ಇಲಾಖೆ,
ನಂ.5 ಉಪ ವಿಭಾಗ, ಸಾಗರ.

**ನಮೂನೆ**

**ಮಾಹಿತಿ ಹಕ್ಕು ಅಧಿನಿಯಮ– 2005**

**ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಲೋ.ಬಂ ಮತ್ತು ಒ.ಜ.ಸಾ ಇಲಾಖೆ ನಂ.5 ಉಪ ವಿಭಾಗ ಸಾಗರ**

ಮಾಹಿತಿ ಹಕ್ಕು ಅಧಿನಿಯಮ– 2005 ಸೆಕ್ಷನ್ 5(1)(2) ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

ಈ ಕಛೇರಿಯಲ್ಲಿ ಮಾಹಿತಿ ದಾಖಲೆಗಳನ್ನು ನೀಡುವ ಅಧಿಕಾರಿಗಳು : ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1)ರ ಪ್ರಕಾರ.

ಅಧಿಕಾರಿ ಹೆಸರು: ಪದನಾಮ:

ಶ್ರೀ ಕೆ.ಎನ್ ದಿನೇಶ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್

ಲೋ.ಬಂ ಮತ್ತು ಒ.ಜ.ಸ. ಇಲಾಖೆ

ನಂ.5 ಉಪ ವಿಭಾಗ, ಸಾಗರ

ದೂರವಾಣಿ : 08183–226213

**ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2)ರ ಪ್ರಕಾರ.**

ಅಧಿಕಾರಿ ಹೆಸರು: ಪದನಾಮ:

ಶ್ರೀ ಕೆ.ಜೆ ಭೀಮಾನಾಯ್ಕ್ ಸಹಾಯಕ ಇಂಜಿನಿಯರ್

ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಕಛೇರಿ

ಲೋ.ಬಂ ಮತ್ತು ಒ.ಜ.ಸ. ಇಲಾಖೆ

ನಂ.5 ಉಪ ವಿಭಾಗ, ಸಾಗರ

ದೂರವಾಣಿ : 08183–226213

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಸೆಕ್ಷನ್ 19(1)ರ ಪ್ರಕಾರ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.

ಕಾರ್ಯಪಾಲಕ ಇಂಜಿನಿಯರ್

ಲೋ.ಬಂ ಮತ್ತು ಒ.ಜ.ಸ. ಇಲಾಖೆ

ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(1) ಪ್ರಕಾರ ಶ್ರೀ ಕೆ.ಎನ್ ದಿನೇಶ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 13–07–2009 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಸಹಿ:

ಪದನಾಮ: ಸಹಾಯಕ ಕಾರ್ಯಪಾಲಕ ಇಂಜಿನಿಯರ್

ಲೋ.ಬಂ ಮತ್ತು ಒ.ಜ.ಸ. ಇಲಾಖೆ

ನಂ.5 ಉಪ ವಿಭಾಗ, ಸಾಗರ

ದೂರವಾಣಿ:08183–226213

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(2) ಪ್ರಕಾರ ಶ್ರೀ ಕೆ.ಜೆ ಭೀಮಾನಾಯ್ಕ್ ಸಹಾಯಕ ಇಂಜಿನಿಯರ್, ಆದ ನಾನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಒ) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 23–10–2009 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಪದನಾಮ: ಸಹಾಯಕ ಇಂಜಿನಿಯರ್

ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಕಛೇರಿ

ಲೋ.ಬಂ ಮತ್ತು ಒ.ಜ.ಸ. ಇಲಾಖೆ

ನಂ.5 ಉಪ ವಿಭಾಗ, ಸಾಗರ

ದೂರವಾಣಿ : 08183–226213

**ಸುವರ್ಣ ಕರ್ನಾಟಕ– 2005**

**ಕರ್ನಾಟಕ ಸರ್ಕಾರ**

**(ಲೋಕೋಪಯೋಗಿ ಇಲಾಖೆ)**

**ಮಾಹಿತಿ ಹಕ್ಕು ಕೈಪಿಡಿ–2005**

**ಸೆಕ್ಷನ್ 4 (1) (ಬಿ) ಅನ್ವಯ**

ಸಹಾಯಕ ಕಾರ್ಯಪಾಲಕ ಇಂಜಿನಿಯರ್

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

ನಂ.5 ನೇ ಉಪವಿಭಾಗ, ಸಾಗರ

ಶಿವಮೊಗ್ಗ ಜಿಲ್ಲೆ

ಸುವರ್ಣ ಕರ್ನಾಟಕ– 2005

ಕರ್ನಾಟಕ ಸರ್ಕಾರ

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

ಸಾಗರ ಉಪ ವಿಭಾಗ, ಸಾಗರ

ಮಾಹಿತಿ ಹಕ್ಕು ಕೈಪಿಡಿ – 2005 ಸೆಕ್ಷನ್ 4(1) (ಬಿ) ಅನ್ವಯ

1. ಸಂಸ್ಥೆಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು :–

ಅ) ಸಂಸ್ಥೆಯ ಹೆಸರು : ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
ನಂ.5 ನೇ ಉಪ ವಿಭಾಗ ಸಾಗರ.

ಆ) ರಚನೆ :

| **ಸಹಾಯಕ ಕಾರ್ಯಪಾಲಕ ಇಂಜಿನಿಯರ್** | |
|---|---|
| **ತಾಂತ್ರಿಕ ಶಾಖೆ** | **ಆಡಳಿತ ಶಾಖೆ** |
| ಸಹಾಯಕ ಇಂಜಿನಿಯರ್– 2 | ಪ್ರಥಮ ದರ್ಜೆ ಸಹಾಯಕರು– 1 |
| ಕಿರಿಯ ಇಂಜಿನಿಯರ್ – 6 | ದ್ವಿತೀಯ ದರ್ಜೆ ಸಹಾಯಕರು– 2 |
| | ಚಾಲಕರು – 2 |
| | 'ಡಿ' ದರ್ಜೆ ನೌಕರರು –2 |
| | ಟಿ.ಬಿ. ಮೇಟಿ – 3 |
| | ವಾಟರ್ ಬಾಯ್ – 2 |
| | ಸ್ವೀಪರ್ – 3 |

**ಕಾರ್ಯಗಳು ಮತ್ತು ಕರ್ತವ್ಯಗಳು:**

ಸಾಗರ ತಾಲ್ಲೂಕಿನ ವ್ಯಾಪ್ತಿಯಲ್ಲಿ ವಿವಿಧ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಬರುವ ಎಲ್ಲಾ ಕಾಮಗಾರಿಗಳ ಪೂರ್ಣ ಕಾರ್ಯ ವ್ಯಾಪ್ತಿಯನ್ನು ಹೊಂದಿದ್ದು, ಹಾಗೂ ಸಾರ್ವಜನಿಕ ಆಸ್ತಿ–ಪಾಸ್ತಿಗಳಿಗೆ ಸಂಬಂಧಿಸಿದ ಆಡಳಿತಾತ್ಮಕ, ಆರ್ಥಿಕ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ.

**II. ಅಧಿಕಾರಿ ಮತ್ತು ಸಿಬ್ಬಂದಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು :**

1. **ಸಹಾಯಕ ಕಾರ್ಯಪಾಲಕ ಇಂಜಿನಿಯರರು :**

ಲೋಕೋಪಯೋಗಿ ಇಲಾಖೆ, ನಂ.5ನೇ ಉಪವಿಭಾಗ, ಸಾಗರ ಕಛೇರಿಯ ಅಧಿಕೃತ ಮುಖ್ಯಸ್ಥರಾಗಿದ್ದು, ಇಲಾಖಾ ಮುಖ್ಯಸ್ಥರ ಮೇಲಾಧಿಕಾರಿಗಳ ನಿರ್ದೇಶನಗಳನ್ನು ನಿಯಮದ ಚೌಕಟ್ಟಿನಲ್ಲಿ ಜಾರಿಗೊಳಿಸುವ ಅಧಿಕಾರ ಮತ್ತು ಜವಾಬ್ದಾರಿಗಳನ್ನು ಹೊಂದಿರುತ್ತಾರೆ, ಹಾಗೂ ಕಛೇರಿಯ ಸಿಬ್ಬಂದಿ ಮತ್ತು ಕಾಮಗಾರಿಗಳ ಮೇಲ್ವಿಚಾರಣೆ ಹಾಗೂ ನಿಯಂತ್ರಣದ ಅಧಿಕಾರವನ್ನು ಹೊಂದಿರುತ್ತಾರೆ.

**ತಾಂತ್ರಿಕ ಶಾಖೆ :**

**2. ಸಹಾಯಕ ಇಂಜಿನಿಯರುಗಳು – 2 :**

ಉಪವಿಭಾಗ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಗೆಯ ಕಾಮಗಾರಿಗಳ ನಕ್ಷೆ ಮತ್ತು ಅಂದಾಜು ಪಟ್ಟಿಗಳನ್ನು ತಯಾರಿಸುವುದು ಹಾಗೂ ಕಾಮಗಾರಿಗಳ ಪೂರ್ಣ ಉಸ್ತುವಾರಿ, ನಿರ್ವಹಣೆ ಮಾಡುವುದು, ಹಾಗೂ ಕಾಮಗಾರಿಗಳ ಬಿಲ್ಲನ್ನು ತಯಾರಿಸುವುದು ಮತ್ತು ಸಂಬಂಧಪಟ್ಟಂತೆ ಶಾಖೆಯ ಪೂರ್ಣ ಉಸ್ತುವಾರಿ ಮತ್ತು ಪತ್ರ ವ್ಯವಹಾರ.

**3. ಕಿರಿಯ ಇಂಜಿನಿಯರುಗಳು –6 :**

ಉಪವಿಭಾಗ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಗೆಯ ಕಾಮಗಾರಿಗಳ ನಕ್ಷೆ ಮತ್ತು ಅಂದಾಜು ಪಟ್ಟಿಗಳನ್ನು ತಯಾರಿಸುವುದು ಹಾಗೂ ಕಾಮಗಾರಿಗಳ ಪೂರ್ಣ ಉಸ್ತುವಾರಿ : ನಿರ್ವಹಣೆ ಮಾಡುವುದು, ಹಾಗೂ ಕಾಮಗಾರಿಗಳ ಬಿಲ್ಲನ್ನು ತಯಾರಿಸುವುದು ಮತ್ತು ಸಂಬಂಧಪಟ್ಟಂತೆ ಶಾಖೆಯ ಪೂರ್ಣ ಪತ್ರ ವ್ಯವಹಾರ ಹಾಗೂ ಮಾಸಿಕ ಎಂ.ಎಂ.ಆರ್. ಮೀಟಿಂಗ್‌ಗೆ ವರದಿ ಸಲ್ಲಿಸುವುದು, ಉಪವಿಭಾಗ ವ್ಯಾಪ್ತಿಯ ಎಲ್ಲಾ ರಸ್ತೆ, ಸೇತುವೆ, ಕಟ್ಟಡಗಳ ಅಂಕಿ ಅಂಶ ನಿರ್ವಹಣೆ ಮಾಡುವುದು, ವಾರ್ಷಿಕ ಆಡಳಿತಾತ್ಮಕ ಪ್ರಗತಿ ವರದಿ ತಯಾರಿಸಿ ಮೇಲಾಧಿಕಾರಿಗಳಿಗೆ, ಎಲ್‌ಎಕ್ಯೂ : ಎಲ್‌ಸಿಕ್ಯೂ ಪತ್ರ ವ್ಯವಹಾರ ನಡೆಸುವುದು.

**ಆಡಳಿತ ಶಾಖೆ :–**

**1. ಪ್ರಥಮ ದರ್ಜೆ ಸಹಾಯಕರು – 1 :**

ಆಡಳಿತ ಶಾಖೆಯ ವ್ಯವಹಾರ, ಮಾಸಿಕ ನಗದು ಲೆಕ್ಕ ಹೊಂದಾಣಿಕೆ, ಮತ್ತು ನಗದು ಪುಸ್ತಕದ ನಿರ್ವಹಣೆ, ಸಿಬ್ಬಂದಿ ಆಯವ್ಯಯ ಬಜೆಟ್ ಕೆ.ಎ.ಟಿ. ಕಾರ್ಮಿಕ ನ್ಯಾಯಾಲಯ ಮತ್ತು ರಾಜ್ಯದ ನ್ಯಾಯಾಲಯದ ಪ್ರಕರಣಗಳ ಕಡತಗಳನ್ನು ನಿರ್ವಹಿಸುವುದು, ಕಛೇರಿಯ ವ್ಯಾಪ್ತಿಯಲ್ಲಿ ಬರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳ ಕೊಠಡಿಗಳನ್ನು ಕಾಯ್ದಿರಿಸುವುಕೆ ಹಾಗೂ ಪತ್ರ ವ್ಯವಹಾರ ಆಡಳಿತ ಶಾಖೆಯ ಕಡತಗಳನ್ನು ವಿಷಯ ನಿರ್ವಾಹಕರಿಂದ ಸಕಾಲದಲ್ಲಿ ವಿಲೆವಾರಿಯಾಗುವಂತೆ ಸಹಕರಿಸಿ ಮೇಲ್ವಿಚಾರಣೆ ಮಾಡುವುದು.

**2. ದ್ವಿತೀಯ ದರ್ಜೆ ಸಹಾಯಕರು – 2 :**

ಸಿಬ್ಬಂದಿ ಶಾಖೆಯಲ್ಲಿದ್ದು ಪತ್ರಗಳ ಸ್ವೀಕೃತಿ ಮತ್ತು ವಿಲೇವಾರಿ ಬಗ್ಗೆ ಕೆಲಸ ನಿರ್ವಹಿಸುವುದು, ಮಾಸಿಕ ವರದಿಗಳ ಸಲ್ಲಿಕೆ, ಕಛೇರಿ ಸಿಬ್ಬಂದಿಯವರ ವೇತನ, ಭತ್ಯೆಗಳ ಬಿಲ್ಲು ತಯಾರಿಸುವುದು, ಸಿಬ್ಬಂದಿ ವೆಚ್ಚದ ವರದಿ ಸಲ್ಲಿಕೆ, ಸೇವಾ ಪುಸ್ತಕಗಳ ನಿರ್ವಹಣೆ, ಪ್ರವಾಸಿ ಭತ್ಯೆ ಬಿಲ್ಲು ತಯಾರಿಕೆ, ಸಾದಿಲ್ವಾರು ಬಿಲ್ಲು ತಯಾರಿಕೆ, ಉಗ್ರಾಣದ ಪತ್ರ ವ್ಯವಹಾರಗಳ ನಿರ್ವಹಣೆ, ಉಪವಿಭಾಗ ಕಛೇರಿಯ ಲೇಖನ ಸಾಮಾಗ್ರಿ ಖರೀದಿ ಮುಂತಾದ ಕೆಲಸ ನಿರ್ವಹಿಸುವುದು.

**3. ಚಾಲಕರು–2 :**

ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ವಾಹನ ಚಾಲನೆ ಮತ್ತು ಕಛೇರಿಯ ಇತರೆ ವಾಹನಗಳ ಚಾಲನೆ ಮತ್ತು ನಿರ್ವಹಣೆ ನಡೆಸುವುದು.

**4. 'ಡಿ' ದರ್ಜೆ ನೌಕರರು –2 :**

ಕಛೇರಿಯ ಎಲ್ಲಾಕೊಠಡಿಗಳನ್ನು ಶುಚಿಯಾಗಿಡುವುದು, ಕಡತಗಳ ವಿಲೇವಾರಿ ಬಗ್ಗೆ ಅಧಿಕಾರ : ಸಿಬ್ಬಂದಿಯವರಿಗೆ ಸಹಕರಿಸುವುದು, ಕಡತ, ಟಪಾಲು ಇತ್ಯಾದಿಗಳನ್ನು ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ ತಲುಪಿಸುವುದು.

**5. ಮೇಟಿ – 3 :**

ಉಪ ವಿಭಾಗ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳಲ್ಲಿ ಕಾಯ್ದಿರಿಸಿದ ಕೊಠಡಿಗಳನ್ನು ಅಧಿಕಾರಿ ವರ್ಗ ಸಾರ್ವಜನಿಕರಿಗೆ ನಿಗದಿತ ಬಾಡಿಗೆ ಪಡೆದು ಕ್ರಮವಾಗಿ ವಿತರಿಸುವುದು, ಹಾಗೂ ಸರ್ಕಾರಿ ನಿಯಮಗಳನ್ನು ಪಾಲಿಸುವುದು. ಉಸ್ತುವಾರಿ ನಿರ್ವಹಣೆ.

**6. ವಾಟರ್ ಬಾಯ್ –2 :**

ಉಪ ವಿಭಾಗ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳ ಕೊಠಡಿಗಳನ್ನು ಶುಚಿಗೊಳಿಸುವುದು ಮತ್ತು ಸರ್ಕಾರಿ ನಿಯಮಗಳನ್ನು ಪಾಲಿಸುವುದು.

**7. ಸ್ವೀಪರ್ – 3 :**

ಉಪ ವಿಭಾಗ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹ–ಪ್ರವಾಸಿ ಮಂದಿರಗಳ ಆವರಣ ಶುಚಿಗೊಳಿಸುವುದು, ಶೌಚಾಲಯ ಶುಚಿತ್ವ ನಿರ್ವಹಣೆ ಮಾಡುವುದು, ಅಲಂಕರಿತ ಗಿಡಗಳ ನಿರ್ವಹಣೆ ಮಾಡುವುದು.

**III. ಮೇಲ್ವಿಚಾರಣೆ ಮತ್ತು ಜವಾಬ್ದಾರಿಗಳನ್ನು ಒಳಗೊಂಡಂತೆ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕ್ರಮಗಳು :–**

**ಸಹಾಯಕ ಕಾರ್ಯಪಾಲಕ ಇಂಜಿನಿಯರರು :–**

ಸರ್ಕಾರದಿಂದ ಲಭ್ಯವಾದ ಅಧಿಕಾರ ಪ್ರತ್ಯಾ ಯೋಜನೆಯ ಅನುಸಾರ ತಾಂತ್ರಿಕ ಮತ್ತು ಆಡಳಿತಾತ್ಮಕ ವಿಷಯಗಳ ಬಗ್ಗೆ ಅಂತಿಮ ನಿರ್ಣಯ ಕೈಗೊಳ್ಳುವುದು, ಉಪ ವಿಭಾಗ ವ್ಯಾಪ್ತಿಯ ಕಾಮಗಾರಿಗಳ ಕಾರ್ಯನೀತಿಯ ಬಗ್ಗೆ ಪ್ರಸ್ತಾವನೆಗಳನ್ನು ಇಲಾಖಾ ಮುಖ್ಯಸ್ಥರಿಗೆ : ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

**ಸಹಾಯಕ ಇಂಜಿನಿಯರರು : ಕಿರಿಯ ಇಂಜಿನಿಯರರು :–**

ಉಪ ವಿಭಾಗ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ನಕ್ಷೆಗಳನ್ನು ತಯಾರಿಸುವುದು ಕಾಮಗಾರಿಗಳ ಪೂರ್ಣ ಉಸ್ತುವಾರಿ ನೋಡಿಕೊಳ್ಳುವುದು ಹಾಗೂ ಕಾಮಗಾರಿಗಳ ಬಿಲ್ಲನ್ನು ತಯಾರಿಸುವುದು, ಕಡತ ಮಂಡಿಸುವುದು, ಅಧಿಕಾರ ಪ್ರತ್ಯಾಯೋಜನೆಯ ಬಗ್ಗೆ ಮಾಹಿತಿ ಒದಗಿಸುವುದು, ಕಾಮಗಾರಿಗಳ ಪತ್ರ ವ್ಯವಹಾರ ನಡೆಸುವುದು, ತಾಲ್ಲೂಕಿನ ಕಾಮಗಾರಿಗಳ ಬಗ್ಗೆ ಪ್ರಗತಿ ವರದಿ ಸಿದ್ದಪಡಿಸುವುದು, ಕಾಮಗಾರಿ ಬಜೆಟ್ ನಿರ್ವಹಣೆ ಹಾಗೂ ಮೀಟಿಂಗ್ ವರದಿಗಳನ್ನು ತಯಾರಿಸುವುದು.

**ಪ್ರಥಮ ದರ್ಜೆ ಮತ್ತು ದ್ವಿತೀಯ ದರ್ಜೆ ಸಹಾಯಕರು :–**

ಆಡಳಿತ ಶಾಖೆಯ ಪತ್ರ ವ್ಯವಹಾರ, ಪ್ರಸ್ತಾವನೆಗಳು, ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ ಶಿಫಾರಸ್ಸಿನೊಂದಿಗೆ ಆದೇಶಕ್ಕಾಗಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

**ಚಾಲಕರು :–**

ಸಹಾಯಕ ಕಾರ್ಯಪಾಲಕ ಇಂಜಿನಿಯರರವರ ವಾಹನ ಚಾಲನೆಯ ಕೆಲಸ ಮತ್ತು ವಾಹನಗಳ ಉಸ್ತುವಾರಿ ನಿರ್ವಹಿಸುವುದು..

**'ಡಿ' ದರ್ಜೆ ನೌಕರರು :–**

ಕಛೇರಿಯ ಎಲ್ಲಾಕೊಠಡಿಗಳನ್ನು ಶುಚಿಯಾಗಿಡುವುದು, ಕಡತ, ಟಪಾಲು ಇತ್ಯಾದಿಗಳನ್ನು ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ ತಲುಪಿಸುವುದು.

**ಮೇಟಿ :–**

ಉಪ ವಿಭಾಗ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳಲ್ಲಿ ಕಾಯ್ದಿರಿಸಲಾದ ಕೊಠಡಿಗಳನ್ನು ಅಧಿಕಾರಿಗಳಿಗೆ ಸಾರ್ವಜನಿಕರಿಗೆ ನಿಗದಿತ ಬಾಡಿಗೆ ಪಡೆದು ಕ್ರಮವಾಗಿ ವಿತರಣೆ ಮಾಡುವುದು.

**ವಾಟರ್ ಬಾಯ್:–**

ಉಪ ವಿಭಾಗ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳ ಕೊಠಡಿಗಳನ್ನು ಶುಚಿಗೊಳಿಸುವುದು.

**ಸ್ವೀಪರ್ :–**

ಉಪ ವಿಭಾಗ ವ್ಯಾಪ್ತಿಯಲ್ಲಿ ಇರುವ ಅತಿಥಿ ಗೃಹ– ಪ್ರವಾಸಿ ಮಂದಿರಗಳ ಆವರಣ ಶುಚಿಗೊಳಿಸುವುದು, ಶೌಚಾಲಯಗಳನ್ನು ಶುಚಿತ್ವಗೊಳಿಸುವುದು ಅಲಂಕಾರಿತ ಗಿಡಗಳ ನಿರ್ವಹಣೆ ಮಾಡುವುದು.

**IV. ಕಾರ್ಯನಿರ್ವಹಿಸುವಲ್ಲಿ ಅನುಸರಿಸುವ ಮಾನದಂಡಗಳು :–**

ಕೆಪಿಡಬ್ಲೂಡಿ ಕೋಡ್ ಮತ್ತು ಕೆಪಿಡಬ್ಲೂ 'ಎ' ಕೋಡ್ ಮತ್ತು Karnataka Transparency in Public procurement Act-2002 ರಲ್ಲಿ ನಿಗದಿಪಡಿಸಿರುವ ಮಾನದಂಡಗಳನ್ನು ಅನುಸರಿಸುವುದು.

**V. ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು ನಿಬಂಧನೆಗಳು, ಸೂಚನೆಗಳು ಕೈಪಿಡಿ ಮತ್ತು ದಾಖಲೆಗಳು :–**

ಅ) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958

ಆ) ಕರ್ನಾಟಕ ಆರ್ಥಿಕ ಸಂಹಿತೆ ನಿಯಮ

ಇ) ಖಜಾನೆ ಸಂಹಿತೆ

| ಕ್ರ. ಸಂ. | ಕಛೇರಿಯ ಹೆಸರು | ಮಾಹಿತಿ ಹಕ್ಕು ಕಾಯ್ದೆ 2005 (1) ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಕಾಯ್ದೆ 2005 ರ ಸೆಕ್ಷನ್ 5(2) ರ ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಕಾಯ್ದೆ 2005 ರ ಸೆಕ್ಷನ್ 19 (1) ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 6 | ಭೂಮಾಪನ ಶಾಖೆ ಆನೇಕಲ್. ತಾಲ್ಲೂಕು ಕಛೇರಿ | ಪರ್ಯಾವೀಕ್ಷಕರು ಭೂಮಾಪನ ಶಾಖೆ | ಭೂಮಾಪಕರು | ತಹಶೀಲ್ದಾರ್ ಆನೇಕಲ್ ತಾಲ್ಲೂಕು |
| 7 | ಆಹಾರ ಶಾಖೆ ಆನೇಕಲ್ ತಾಲ್ಲೂಕು ಕಛೇರಿ | ಆಹಾರ ಶಿರಸ್ತೇದಾರ್ ಆನೇಕಲ್. ತಾಲ್ಲೂಕು | ಆಹಾರ ನಿರೀಕ್ಷಕರು | ತಹಶೀಲ್ದಾರ್ ಆನೇಕಲ್ ತಾಲ್ಲೂಕು |

**(ಸೆಕ್ಷನ್ 4(1)(ಬಿ) (xvii))**

**ನಿರ್ದಿಷ್ಟಪಡಿಸಬಹುದಾದ ಇತರ ಮಾಹಿತಿಗಳು**

1. ಕಛೇರಿಯಲ್ಲಿ ಸಾರ್ವಜನಿಕರ ಕುಂದುಕೊರತೆಗಳ ಕೌಂಟರ್‌ನ್ನು ತೆರೆಯಲಾಗಿರುತ್ತದೆ. ಹಾಗೂ ಸ್ವೀಕೃತಿಯಾದ ಎಲ್ಲಾ ಅರ್ಜಿಗಳಿಗೆ ಹಿಂಬರಹದ ಮೂಲಕ ತಿಳಿಸಲಾಗುತ್ತದೆ. ಕರ್ನಾಟಕ ಮಾಹಿತಿ ಪಡೆಯಲು ಮಾಹಿತಿ ಹಕ್ಕು ಅಧಿನಿಯಮ, 2005 ರಂತೆ ತಾಲ್ಲೂಕು ಕಛೇರಿಯಲ್ಲಿ ಸಕ್ಷಮ ಪ್ರಾಧಿಕಾರವೆಂದು ಘೋಷಿಸಲ್ಪಟ್ಟಿರುವ ತಾಲ್ಲೂಕು ಶಿರಸ್ತೇದಾರ್ ರವರು ಸಾರ್ವಜನಿಕ ಸಂಪರ್ಕ ಅಧಿಕಾರಿಯಾಗಿ ನಿಯಮಾವಳಿ ರೀತ್ಯಾ ಕಾರ್ಯನಿರ್ವಹಿಸುತ್ತಾರೆ.
2. ದಸ್ತಾವೇಜು ಪ್ರತಿಗಳನ್ನು ಆದೇಶದ ನಕಲುಗಳನ್ನು ಪಡೆಯಲು ಇಚ್ಛಿಸಿದಲ್ಲಿ, ಅರ್ಜಿಯನ್ನು ಸಲ್ಲಿಸಿ ಅದಕ್ಕಾಗಿ ನಿಗದಿಪಡಿಸಿದ ಶುಲ್ಕವನ್ನು ಆಯಾ ಲೆಕ್ಕ ಶೀರ್ಷಿಕೆಯಡಿಯಲ್ಲಿ ಸೂಚಿಸಿರುವಂತೆ ಹಣ ಸಂದಾಯ/ ಡಿಡಿ/ ಪೋಸ್ಟಲ್ ಆರ್ಡರ್ ಮೂಲಕ ಸರ್ಕಾರಕ್ಕೆ ಪಾವತಿಸಿ ಗರಿಷ್ಠ 3 ದಿನಗಳೊಳಗಾಗಿ ನಕಲುಗಳನ್ನು ಪಡೆಯುವ ಸೌಲಭ್ಯ ಒದಗಿಸಿಕೊಡಲಾಗಿದೆ.
3. ತಾಲ್ಲೂಕು ಕಛೇರಿಯಲ್ಲಿ ಮಾಹಿತಿ ಕೇಂದ್ರ ತೆರೆದು ಇಲಾಖೆಯಲ್ಲಿ ಆಗಿರುವ ಎಲ್ಲಾ ಕಾರ್ಯಗಳ ಅರ್ಜಿ ನಮೂನೆ ಮಂಜೂರಾತಿಗೆ ನೀಡಲಾಗುವ ಕಾಲಾವಧಿ ನಿಗದಿ ಇತ್ಯಾದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯವನ್ನು ಕೈಗೊಳ್ಳಲಾಗುವುದು.
4. ತಾಲ್ಲೂಕು ಕಛೇರಿಯಲ್ಲಿ ಆಡಳಿತ ನಿರ್ವಹಣೆ ನಿಟ್ಟಿನಲ್ಲಿ ತಾಲ್ಲೂಕು ವೆಬ್‌ಸೈಟ್ ಸೃಷ್ಟಿಸಲು ಮತ್ತು ಕಡತಗಳನ್ನು ಕಂಪ್ಯೂಟರ್ ಮೂಲಕವೇ ನಿರ್ವಹಿಸುವಂತಹ ಯೋಜನೆಯನ್ನು ಸರ್ಕಾರದಿಂದ ಅಂಗೀಕೃತ ಪಡೆದು ನಿರ್ವಹಿಸಲಾಗುವುದು.
5. ತಾಲ್ಲೂಕು ಕಛೇರಿಯಲ್ಲಿ ಸಿಬ್ಬಂದಿ ಮತ್ತು ಲೆಕ್ಕಪತ್ರ / ಚುನಾವಣೆ/ ಕಂದಾಯ/ ಕಾನೂನು/ ಶಿಷ್ಠಾಚಾರ/ ಸ್ವೀಕೃತಿ ಮತ್ತು ರವಾನೆ ಶಾಖೆ/ ಸಾರ್ವಜನಿಕ ಕುಂದುಕೊರತೆ/ ಆಡಳಿತ/ ಡಿ.ವಿ.ಎಸ್/ ಎಂಎಜಿ/ ಇಎನ್‌ಟಿ/ ಭೂ ಸುಧಾರಣೆ/ ಎನ್.ಸಿಆರ್/ ಎಆರ್‌ಎಂ/ ಐಎನ್‌ಡಿ/ ಡಿಸಿಬಿ/ ರಾಷ್ಟ್ರೀಯ ಹಬ್ಬಗಳು/ ಎಲ್‌ಎನ್‌ಡಿ/ ಆರ್‌ಯುಸಿ/ ಧಫ್ತರ್ ತನಿಖೆಗಳು/ ಮಿಸಲೇನಿಯಸ್ ಶಾಖೆಗಳಿಗೆ ಶಿರಸ್ತೇದಾರರು ಇರುತ್ತಾರೆ ಇವರಿಗೆ ವಹಿಸಲಾದ ಶಾಖೆಯ ಮೇಲ್ವಿಚಾರಣೆ ಮಾಡುತ್ತಾರೆ. ಇವರುಗಳು ತಹಶೀಲ್ದಾರ್ ರವರುಗ'ಳಿಗೆ ಅಧೀನ ಸಿಬ್ಬಂದಿಗಳಾಗಿ ಕಾರ್ಯನಿರ್ವಹಿಸುತ್ತಾರೆ.
6. ತಾಲ್ಲೂಕು ವ್ಯಾಪ್ತಿಯ ಎಲ್ಲಾ ಅಧೀನ ಕಾರ್ಯಾಲಯಗಳು ಮತ್ತು ನಾಡ ಕಛೇರಿಯ ನಿರ್ವಹಣೆಯನ್ನು ಮಾಡಲಾಗುತ್ತದೆ. ಹಾಗೂ ಗ್ರಾಮ ಸಹಾಯಕರ ನೇಮಕ/ ವರ್ಗಾವಣೆಗಳನ್ನು ನಡೆಸುವುದು.
7. ನೈಸರ್ಗಿಕ ವಿಕೋಪ:– ಬರ ಮತ್ತು ಅತಿವೃಷ್ಟಿಗಳು ಸಂಭವಿಸಿದಾಗ ತುರ್ತು ರಕ್ಷಣಾ ಕ್ರಮಗಳನ್ನು ಜರುಗಿಸುವುದು ಮತ್ತು ಸಂತ್ರಸ್ತರಿಗೆ ಪರಿಹಾರ ನೀಡಲಾಗುವುದು. ಪ್ರಕೃತಿ ವಿಕೋಪ/ ಸಿಡಿಲು ಬಡಿದು ಮೃತಪಟ್ಟ ಕುಟುಂಬದವರಿಗೆ ಪರಿಹಾರ ನೀಡಲು ಹಾಗೂ ಆಕಸ್ಮಿಕ ಬೆಂಕಿ ಸಂಭಾವಿಸಿದಾಗ ಸಂತ್ರಸ್ತರಿಗೆ ಪರಿಹಾರ ನೀಡುವ ಕಾರ್ಯಕೈಗೊಳ್ಳಲಾಗುತ್ತದೆ.

8. ಭೂ ಮಂಜೂರಾತಿ:– ತಾಲ್ಲೂಕು ಕಛೇರಿಯಲ್ಲಿ ಭೂ ಮಂಜೂರಾತಿಯ ಪ್ರಕರಣಗಳಿಗೆ ಸಂಬಂಧಿಸಿದಂತೆ ತನಿಖೆ ನಡೆಸಿ ಮೇಲಧಿಕಾರಿಗಳಿಗೆ ವರದಿ ಸಲ್ಲಿಸುವುದು. ಅಕ್ರಮ ಸಕ್ರಮ ಸಮಿತಿಗಳಲ್ಲಿ ಮಂಜೂರಾದ ಪ್ರಕರಣಗಳಿಗೆ ಹಕ್ಕು ಪತ್ರಗಳನ್ನು ನೀಡಲಾಗುತ್ತದೆ. ಸರ್ಕಾರಿ ಜಮೀನನ್ನು ಅನಧಿಕೃತವಾಗಿ ಅತಿಕ್ರಮಣ ಮಾಡಿರುವುದನ್ನು ಗುರುತಿಸಿ ಅದನ್ನು ತೆರವುಗೊಳಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತದೆ.

9. ಭೂ ಸ್ವಾಧೀನ:– ಭೂಸ್ವಾಧೀನತೆಯ ಪ್ರಕರಣಗಳ ಬಗ್ಗೆ ತನಿಖೆ ನಡೆಸಿ ಉಪ ವಿಭಾಗಾಧಿಕಾರಿಗಳಿಗೆ ವರದಿ ಸಲ್ಲಿಸಲಾಗುವುದು.

10. ಭೂ ಸುಧಾರಣೆ:– ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961 ರಲ್ಲಿ ಅವಕಾಶವಿದ್ದಂತೆ ಕಲಂ 48 ರಡಿಯಲ್ಲಿ ನೇಮಕವಾದ ಭೂ ಸುಧಾರಣಾ ಸಮಿತಿಗೆ ಕಾರ್ಯದರ್ಶಿಯಾಗಿ ತಹಶೀಲ್ದಾರ್ ರವರು ಕಾನೂನಿನ ಪರಿಮಿತಿಯಲ್ಲಿ ಕೆಲಸ ನಿರ್ವಹಿಸುವರು.

11. ಸರ್ಕಾರಿ ಬಾಕಿ ವಸೂಲಿ:– ಕೃಷಿ ಜಮೀನುಗಳ ಹಿಡುವಳಿಯ ಮೇಲೆ ನಿಗದಿಪಡಿಸಿದ ಕಂದಾಯ/ ನೀರಾವರಿಕರ/ ಸೆಸ್ಸ್ ಗಳು ಮತ್ತು ಇತರೆ ಕಂದಾಯ ಬೇಡಿಕೆ ಪಟ್ಟಿ ತಯಾರಿಸಲಾಗುವುದು, ವಸೂಲಿ ಮತ್ತು ಬಾಕಿಗಳ ನಿರ್ವಹಣೆ ಮಾಡುವುದು ಸರ್ಕಾರದ ಇತರೆ ಇಲಾಖೆಗಳಿಂದ ವಸೂಲಿ ಮಾಡದೆ ಇರುವ ತೆರಿಗೆಗಳ ಬಾಕಿ ಹಾಗೂ ಸಾಲಗಳನ್ನು ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಕ್ರಮ ಜರುಗಿಸಲಾಗುವುದು.

12. ಗಣಿಗಾರಿಕೆ:– ಗಣಿಗಾರಿಕೆಗೆ ಸಂಬಂಧಿಸಿದಂತೆ ಪ್ರಕರಣಗಳ ತನಿಖೆ ನಡೆಸಿ ಮೇಲಧಿಕಾರಿಗೆ ವರದಿ ಸಲ್ಲಿಸುವುದು. ಅಕ್ರಮ ಗಣಿಗಾರಿಕೆ ಬಗ್ಗೆ ತನಿಖೆ ನಡೆಸಿ ಅಕ್ರಮ ಗಣಿಗಾರಿಕೆ ತಡೆಗಟ್ಟುವ ಬಗ್ಗೆ ಕ್ರಮ ವಹಿಸಲಾಗುವುದು.

13. ಮುಜರಾಯಿ:– ಧಾರ್ಮಿಕ ಮತ್ತು ದತ್ತಿ ಇಲಾಖೆಯ ಆಡಳಿತದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ದೇವಸ್ಥಾನ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಜಿಲ್ಲಾಧಿಕಾರಿಗಳಿಂದ ಬಿಡುಗಡೆಯಾಗುವ ತಸ್ತೀಕ್ ಭತ್ಯೆಯನ್ನು ಪಾವತಿಸಲಾಗುವುದು. ಆರಾಧನಾ ಯೋಜನೆ ಅಡಿಯಲ್ಲಿ ತಾಲ್ಲೂಕು ಮಟ್ಟದ ಸಮಿತಿಯನ್ನು ಕರೆದು ಧಾರ್ಮಿಕ ಸಂಸ್ಥೆಗಳಿಗೆ ಅನುದಾನದ ಬಗ್ಗೆ ಶಿಫಾರಸ್ಸು ಪಡೆದು ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಿ ಅನುದಾನ ಮಂಜೂರಾಗಿ ಬಂದ ಧಾರ್ಮಿಕ ಸಂಸ್ಥೆಗಳಿಗೆ ಹಣ ಪಾವತಿಸಿ ಬಳಕೆ ಪ್ರಮಾಣ ಪತ್ರಗಳನ್ನು ಜಿಲ್ಲಾಧಿಕಾರಿಗಳಿಗೆ ಒಪ್ಪಿಸಲಾಗುವುದು.

14. ಲೆಕ್ಕಪತ್ರ:– ಕಛೇರಿ ಸಿಬ್ಬಂದಿಯ ವೇತನ, ಪ್ರವಾಸ ಭತ್ಯೆ, ವೈದ್ಯಕೀಯ ಭತ್ಯೆ, ಸಾದಿಲ್ವಾರು ವೆಚ್ಚ, ವಾಹನಗಳ ಇಂಧನ ಮತ್ತು ದುರಸ್ತಿ ವೆಚ್ಚಗಳಿಗೆ ಮಂಜೂರಾದ ಹಣದ ಬಗ್ಗೆ ಲೆಕ್ಕ ನಿರ್ವಹಣೆ ಮಾಡಿ ಮೇಲಧಿಕಾರಿಗಳಿಗೆ ವರದಿ ಸಲ್ಲಿಸುವುದು.

15. ಚುನಾವಣೆ:– ಕೇಂದ್ರ ಮತ್ತು ರಾಜ್ಯ ಚುನಾವಣಾ ಆಯೋಗದಿಂದ ಬರುವ ಸೂಚನೆಗಳನ್ನು ಪಾಲಿಸಿ ಲೋಕಸಭೆ, ವಿಧಾನ ಸಭೆ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ಗ್ರಾಮ ಪಂಚಾಯಿತಿ, ಸ್ಥಳೀಯ ಸಂಸ್ಥೆಗಳ ಚುನಾವಣಾ ಕಾರ್ಯಸೂಚಿ ಪ್ರಕಾರ ಚುನಾವಣಾ ಕಾರ್ಯಗಳನ್ನು ಕೈಗೊಳ್ಳಲಾಗುವುದು. ಮತದಾರರ ನೋಂದಣಿ, ಮತದಾರರಿಗೆ ಗುರುತಿನ ಚೀಟಿ ನೀಡುವುದು ಹಾಗೂ ಮತದಾರರ ಪಟ್ಟಿ ತಯಾರಿಕೆ ಹಾಗೂ ಪರಿಷ್ಕರಣೆ ಕಾರ್ಯವನ್ನು ನಿರ್ವಹಿಸುವುದು.

16. ಸಭೆ ಮತ್ತು ರಾಷ್ಟ್ರೀಯ ಹಬ್ಬಗಳು:– ತಾಲ್ಲೂಕಿನಲ್ಲಿ ನಡೆಯುವ ಎಲ್ಲಾ ಉತ್ಸವಗಳು, ರಾಷ್ಟ್ರೀಯ ಹಬ್ಬಗಳು ಮತ್ತು ತಾಲ್ಲೂಕು ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಜರುಗುವ ಸಭೆ ಸಮಾರಂಭಗಳನ್ನು ನಿರ್ವಹಣೆ ಮಾಡುವುದು.

17. ಅಭಿಲೇಖಾಲಯ:– ತಾಲ್ಲೂಕು ಕಛೇರಿಯ ಪ್ರತಿಯೊಂದು ಶಾಖೆಯಿಂದ ನಿರ್ವಹಣೆಗಾಗಿ ವಿಷಯ ನಿರ್ವಾಹಕರಿಂದ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಕಡತ/ ಕಾಗದ ಪತ್ರಗಳನ್ನು ಸ್ವೀಕರಿಸಿ ವರ್ಗಾವಾರು ವಿಭಜನೆ ಮಾಡಿ ಈ ಕೆಳಕಂಡ ಶ್ರೇಣಿವಾರು ಹೊಂದಿಸಿ ಇಡಲಾಗುವುದು.

'ಎ' ಡಿಸ್ – ಶಾಶ್ವತ

'ಬಿ' ಡಿಸ್ – 30 ವರ್ಷಗಳು

'ಸಿ' ಡಿಸ್ – 10 ವರ್ಷಗಳು

'ಡಿ' ಡಿಸ್ – 5 ವರ್ಷಗಳು

'ಇ' ಡಿಸ್ – 1 ವರ್ಷ

ಮೇಲೆ ಕಾಣಿಸಿದ ವಿಲೇವಾರಿ ಅವಧಿ ಮುಗಿದ ನಂತರ ಕಛೇರಿಯ ಮುಖ್ಯಸ್ಥರ ಆದೇಶವನ್ನು ಪಡೆದು 'ಎ' ಮತ್ತು 'ಬಿ' ಡಿಸ್‌ಗಳಲ್ಲಿನ ಕಡತಗಳನ್ನು ಹೊರತುಪಡಿಸಿ ಉಳಿದ ಡಿಸ್‌ಗಳ ಕಡತಗಳನ್ನು ನಾಶಪಡಿಸಲು ಕ್ರಮ ಕೈಗೊಳ್ಳಲಾಗುವುದು. ಕಾರ್ಯಾಲಯದ ಪೀಠೋಪಕರಣ, ಕಾರ್ಯನಿರ್ವಹಣೆ, ಯಂತ್ರ, ಸಾಮಗ್ರಿಗಳ ಖರೀದಿ, ಮತ್ತು ದುರಸ್ತಿ ಕಾರ್ಯಗಳು, ಕಛೇರಿಯ ವ್ಯವಹಾರಕ್ಕೆ ಅವಶ್ಯಕವಿರುವ ಲೇಖನ ಸಾಮಗ್ರಿ ಖರೀದಿ, ಮತ್ತು ವಿತರಣೆ, ಕಛೇರಿಯ ಸುವ್ಯವಸ್ಥೆ ಮತ್ತು ವಿದ್ಯುಧೀಕರಣ ನಿರ್ವಹಣೆ, ವಿವಿಧ ಕಾಯ್ದೆಯಡಿ ಇರುವ ಎಲ್ಲಾ ಪುಸ್ತಕಗಳನ್ನು ಸುಸ್ಥಿತಿಯಲ್ಲಿಡುವುದು, ಸಾರ್ವಜನಿಕರು ಕೋರುವ ದಾಖಲೆಗಳ ಪ್ರತಿಗಳನ್ನು ನಿಯಮಾನುಸಾರ ನೀಡಲಾಗುವುದು.

18. ಸಾಮಾಜಿಕ ಭದ್ರತಾ ಯೋಜನೆ:– ಸಾಮಾಜಿಕ ಭದ್ರತಾ ಯೋಜನೆಯಡಿಯಲ್ಲಿ ಬರುವ ಅರ್ಜಿದಾರರಿಗೆ ಅರ್ಹತೆ ಮೇಲೆ ಸರ್ಕಾರದಿಂದ ಮಂಜೂರಾತಿ ನೀಡಿ ಆದೇಶ ಪತ್ರಗಳನ್ನು ನೀಡಲಾಗುವುದು ಹಾಗೂ ಸರ್ಕಾರದಿಂದ ಬಿಡುಗಡೆಯಾಗುವ ಅನುದಾನದಲ್ಲಿ ಪಿಂಚಣಿ ನೀಡುವ ಕಾರ್ಯವನ್ನು ನಿರ್ವಹಿಸಲಾಗುವುದು.

19. ಸ್ವೀಕೃತಿ:– ತಾಲ್ಲೂಕು ಕಛೇರಿಗೆ ಸ್ವೀಕೃತವಾಗುವ ಸರ್ಕಾರದ ಪತ್ರಗಳು, ಮೇಲಾಧಿಕಾರಿಗಳಿಂದ ಬರುವ ಪತ್ರಗಳು, ಅಧೀನ ಕಾರ್ಯಾಲಯದ ಪತ್ರಗಳು, ಸ್ಥಳೀಯ ಸಂಸ್ಥೆಯ ಸದಸ್ಯರುಗಳಿಂದ ಸ್ವೀಕೃತವಾಗುವ ಮನವಿಗಳು, ಸಾರ್ವಜನಿಕರಿಂದ ಬರುವ ಅರ್ಜಿಗಳನ್ನು ತನಿಖೆ ನಡೆಸಿ ನಿಗದಿತ ಸಮಯದಲ್ಲಿ ಸೂಕ್ತ ಮಾಹಿತಿಯನ್ನು ನೀಡಿ ವಿಲೇ ಪಡಿಸಲಾಗುವುದು.

20. ಜನಸ್ಪಂದನ:– ತಾಲ್ಲೂಕಿನಲ್ಲಿ ಸರ್ಕಾರದ ನಿರ್ದೇಶನದಂತೆ ಪ್ರತಿ ಶನಿವಾರಗಳಂದು (ಎರಡನೆ ಶನಿವಾರ ಹೊರತುಪಡಿಸಿ) ಗ್ರಾಮ ಮಟ್ಟದಲ್ಲಿ ಜನಸ್ಪಂದನ ಕಾರ್ಯಕ್ರಮಗಳನ್ನು ವಿವಿಧ ಇಲಾಖೆಗಳ ಸಹಯೋಗದೊಂದಿಗೆ ನಡೆಸಿ ಸಾರ್ವಜನಿಕರ ಅಹವಾಲುಗಳನ್ನು ಸ್ವೀಕರಿಸಿ ಫಲಾನುಭವಿಗಳಿಗೆ ನೀಡಬಹುದಾದ ಸವಲತ್ತುಗಳನ್ನು ನೀಡುವ ಕಾರ್ಯವನ್ನು ನಡೆಸಲಾಗುತ್ತಿದೆ.

ತಹಸೀಲ್ದಾರ್
ಆನೇಕಲ್ ತಾಲ್ಲೂಕು, ಆನೇಕಲ್.

ಪಿ.ಆರ್.494

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ:60:10, ದಿನಾಂಕ:24ನೇ ಮಾರ್ಚ್, 2010**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಶ್ರೀಮತಿ ಸಾವಿತ್ರಿ ಗಂ: ಲೇಟ್ ಬಾಲಕೃಷ್ಣ ಮೂರ್ತಿ,<br>ವಯಸ್ಸು: 30 ವರ್ಷ,<br>ವೃತ್ತಿ: ಮನೆಕೆಲಸ, ವಾಸ: ಬೆಲ್ಲಾರಪ್ಪ ಕಾಲೋನಿ, ಆಂಜನೇಯ ಗುಡಿ ಹತ್ತಿರ, ಎ.ಪಿ.ಎಂ.ಸಿ. ಹಿಂದುಗಡೆ ಕಾಂಪೌಂಡ್, ಬಳ್ಳಾರಿ. | | 1) ಟಿ. ರಮೇಶ್ ಬಾಬು ತಂ: ಲೇಟ್ ತಿಪ್ಪಯ್ಯ.<br>ವಯಸು:32 ವರ್ಷ,<br>ವೃತ್ತಿ: ಮ್ಯಾನೇಜಿಂಗ್ ಡೈರೆಕ್ಟರ್, ಪ್ಯಾಕಿಂಗ್ ಸೆಕ್ಯೂರಿಟಿ ಏಜೆನ್ಸಿಸ್, ವಾರ್ಡ್ ನಂ.22, ಹೌಸ್, ನಂ.33, ನೀರನಗೌಡ ಕಾಲೋನಿ, ಕ್ಲಬ್ ರೋಡ್, ಬಳ್ಳಾರಿ.<br>2) ಹೆಚ್.ಎಂ. ಸೋಮಶೇಖರಯ್ಯ,<br>ತಂದೆ: ಹೆಚ್.ಎಂ. ವೇಮದೇವಯ್ಯ,<br>ವಯಸ್ಸು:45 ವರ್ಷ, ಸಾವಿತ್ರಿ ನಿಲಯ, ಗಣೇಶ ನಗರ, ಸಿರುಗುಪ್ಪ ರಸ್ತೆ, ಬಳ್ಳಾರಿ.<br>3) ಶ್ರೀಮತಿ ಸುಮ ಗಂ: ಹೆಚ್.ಎಂ. ಸೋಮಶೇಖರಯ್ಯ,<br>ವಯಸ್ಸು: 40 ವರ್ಷ,<br>ವೃತ್ತಿ: ಮ್ಯಾನೇಜಿಂಗ್ ಪಾರ್ಟನರ್, ಸಾವಿತ್ರಿ ನಿಲಯ, ಗಣೇಶ್ ನಗರ, ಸಿರುಗುಪ್ಪ ರೋಡ್, ಬಳ್ಳಾರಿ. |

**ಪ್ರಕಟಣೆ**

ಸದರಿ ಅರ್ಜಿದಾರಳಾದ ಶ್ರೀಮತಿ ಸಾವಿತ್ರಿ, ಗಂ: ಲೇಟ್ ಬಾಲಕೃಷ್ಣ ಮೂರ್ತಿ ಇವರು ತಾನು ಮೃತ ಬಾಲಕೃಷ್ಣ ಮೂರ್ತಿಯ ಹೆಂಡತಿ, ವಾರಸುದಾರಳು ಹಾಗೂ ಅವಲಂಬಿತಳೆಂದು ತಿಳಿಸಿ ಮೃತನು 1ನೇ ಪ್ರತಿವಾದಿಯವರಲ್ಲಿ ಸೆಕ್ಯೂರಿಟಿ ಗಾರ್ಡ್ ಆಗಿ ಕೆಲಸ ಮಾಡುತ್ತಿದ್ದು ದಿನಾಂಕ:26.01.2010ರಂದು ಕರ್ತವ್ಯದ ಮೇಲಿದ್ದಾಗ ಅಪಘಾತ ಸಂಭವಿಸಿ ಮಾರಣಾಂತಿಕ ಗಾಯಗಳಿಗೆ ಈಡಾಗಿ ದಿನಾಂಕ:02.02.2010ರಂದು ಮೃತಪಟ್ಟ ದೇಹವನ್ನು ಹೊರತೆಗೆದಿರುತ್ತಾರೆಂದು, ಅಪಘಾತ ಪೂರ್ವದಲ್ಲಿ

ಆತನು ಚೆನ್ನಾಗಿದ್ದು ದುಡಿದು ತನ್ನ ಹಾಗೂ ನಮ್ಮ ಕುಟುಂಬ ನಿರ್ವಹಣೆ ಮಾಡುತ್ತಿದ್ದನೆಂದು ಈಗ ಆತನ ಮರಣದಿಂದ ತಮ್ಮ ಜೀವನ ಸಾಗುವುದು ತುಂಬಾ ಕಷ್ಟಕರವಾಗಿರುತ್ತದೆಂದು ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಬೇರೆ ಯಾರಾದರೂ ತಾವು ಮೃತನ ಸಂಬಂಧೀಕರೆಂದು ಹಾಗೂ ವಾರಸುದಾರರೆಂದು ಪರಿಗಣಿಸಬೇಕೆಂದು ಕೋರಿದಲ್ಲಿ ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದಲ್ಲಿ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ಒಂದು ತಿಂಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್.491

**ಉಪನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ**

**ಜ್ಞಾಪನಾ**

**ಸಂಖ್ಯೆ:ಇ2/ಪ್ರಾಶಾಶಿ/ಶಿಸ್ತುಕ್ರಮ/ಎಸ್‌ಎಲ್‌ಬಿ/2009–10, ದಿನಾಂಕ:25ನೇ ನವೆಂಬರ್, 2009**

**ವಿಷಯ:** ಶ್ರೀಮತಿ ಸಾವಿತ್ರಿ ಕೋಂ ಲಕ್ಷ್ಮಣ ಭಜಂತ್ರಿ ಉರ್ಫ್ ಜಾಲಿಮರದ ಅಮಾನತ ಸಶಿ ಸಹಿಪ್ರಾ ಶಾಲೆ ಬೆಣಚಿ ತಾ:ಜಿ:ಧಾರವಾಡ ಇವರ ಮೇಲಿನ ಕ್ರಿಮಿನಲ್ ಮೊಕದ್ದಮೆಯ ತೀರ್ಪಿನಂತೆ ಶಿಸ್ತಿನ ಕ್ರಮ ಕೈಗೊಂಡು ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಧಾರವಾಡ ಗ್ರಾಮೀಣ ಇವರ ಪತ್ರ ಸಂಖ್ಯೆ:ಎ1(ಎ5): ಪ್ರಾಶಾಶಿ: ಪೊಲೀಸದಸ್ತಗಿರಿ:ಶಿಸ್ತು ಕ್ರಮ:2008–09, ದಿನಾಂಕ:22.06.2009 ಹಾಗೂ ದಿನಾಂಕ:31.08.2009.

2) ಮಾನ್ಯ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಅವರ ಕಛೇರಿ ಪತ್ರ ಸಂಖ್ಯೆ:ಸಿ9/ಪ್ರಾಶಾಶಿ/ಶಿಸ್ತುಕ್ರಮ/ ಎಸ್‌ಎಲ್‌ಬಿ/15/2009–10/2320, ದಿನಾಂಕ:16.10.2009.

3) ಸರ್ಕಾರಿ ಆದೇಶ ಸಿಆಸುಇ/9/ಸೇಇವಿ/95, ದಿನಾಂಕ:26.06.1996.

**ಪ್ರಸ್ತಾವನೆ:**

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖದನ್ವಯ ಶ್ರೀಮತಿ ಸಾವಿತ್ರಿ ಕೋಂ ಲಕ್ಷ್ಮಣ ಭಜಂತ್ರಿ ಉರ್ಫ್ ಜಾಲಿಮರದ ಅಮಾನತ್ತ ಸಶಿ ಸಹಿಪ್ರಾ ಶಾಲೆ ಬೆಣಚಿ ತಾ:ಜಿ:ಧಾರವಾಡ ಇವರ ಮೇಲಿನ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಪೊಲೀಸ್ ಇನ್ಸ್‌ಪೆಕ್ಟರ್ ವಿದ್ಯಾಗಿರಿ ಧಾರವಾಡ ಇವರು ಸದರಿ ಶಿಕ್ಷಕಿಯನ್ನು ದಿನಾಂಕ:10.12.2005ರಂದು ದಸ್ತಗಿರಿ ಮಾಡಿದ್ದು ದಿನಾಂಕ:15.03.2006ರ ವರೆಗೆ ಮಾನ್ಯ ನ್ಯಾಯಾಲಯದ ಬಂಧನದಲ್ಲಿ ಇರಿಸಿರುವರು. ಈ ಕುರಿತು ಕ್ಷೇತ್ರ ಶಿಕ್ಷಣಾಧಿಕಾರಿಗಳು ಸದರಿ ಶಿಕ್ಷಕಿಯನ್ನು ದಿನಾಂಕ:13.12.2005ರ ಕಛೇರಿ ಆದೇಶದಂತೆ ಸೇವೆಯಿಂದ ಈವರೆಗೆ ಅಮಾನತ್ತಿನಲ್ಲಿರಿಸುವರು.

ಈ ಕ್ರಿಮಿನಲ್ ಮೊಕದ್ದಮೆಯ ಪ್ರಕರಣ ಗುನ್ನಾ ನಂ.219/2005 ಸಿ.ಸಿ. ನಂ.ಎಸ್.ಪಿ.ಎಚ್.(ಎಸ್.ಸಿ/ಎಸ್.ಟಿ.) ಸಿ.ಸಿ. ನಂ.3/2006 ಧಾರವಾಡ ಜಿಲ್ಲಾ ನ್ಯಾಯಾಲಯದಲ್ಲಿ ದಿನಾಂಕ:23.01.2008 ರಂದು ಅಂತಿಮ ತೀರ್ಪು ಆಗಿರುವುದು. ಇದರಲ್ಲಿ ಆಪಾದಿತ ನೌಕರರಾದ ಶ್ರೀಮತಿ ಸಾವಿತ್ರಿ ಕೋಂ ಲಕ್ಷ್ಮಣ ಹೊನ್ನಪ್ಪ ಭಜಂತ್ರಿ ಉರ್ಫ್ ಜಾಲಿಮರದ ಅಮಾನತ್ತ ಸಹ ಶಿಕ್ಷಕಿ ಇವರಿಗೆ ಮಾನ್ಯ ನ್ಯಾಯಾಲಯದಿಂದ ಜೀವಾವಧಿ ಶಿಕ್ಷೆ ನೀಡಿ ಆದೇಶವಾಗಿದೆ. ಈ ಕುರಿತು ಪರಿಶೀಲಿಸಿ ಸೇವೆಯಿಂದ ವಜಾ ಮಾಡುವ ಕುರಿತು ಮಾನ್ಯ ಆಯುಕ್ತರು, ಸಾ.ಶಿ. ಇಲಾಖೆ, ಧಾರವಾಡ ಇವರಿಗೆ ಕ.ನಾಸೇ.ನಿ. 103ರ ಅಡಿ ಅನುಮತಿ ಕೋರಲಾಗಿತ್ತು. ಉಲ್ಲೇಖ 2 ರಂತೆ ಮಾನ್ಯ ಆಯುಕ್ತರು ಈ ಕುರಿತು ನಿಯಮಾನುಸಾರ ಸೇವೆಯಿಂದ ವಜಾ ಮಾಡುವ ಕುರಿತು ಸೂಚಿಸಿರುವರು. ಈ ಕುರಿತು ಕೆಳಗೆ ವಿವರಿಸಿದಂತೆ ಆದೇಶಿಸಲಾಗಿದೆ.

**ಆದೇಶ:**

ಶ್ರೀಮತಿ ಸಾವಿತ್ರಿ ಕೋಂ ಲಕ್ಷ್ಮಣ ಭಜಂತ್ರಿ ಉರ್ಫ್ ಜಾಲಿಮರದ ಅಮಾನತ ಸಶಿ ಸಹಿಪ್ರಾ ಶಾಲೆ ಬೆಣಚಿ ತಾ:ಜಿ:ಧಾರವಾಡ, ಇವರ ಮೇಲಿನ ಕ್ರಿಮಿನಲ್ ಮೊಕದ್ದಮೆಯ ಪ್ರಕರಣ ಗುನ್ನಾ ನಂ.219/2005 ಸಿ.ಸಿ.ನಂ.ಎಸ್‌ಪಿಎಚ್.(ಎಸ್.ಸಿ/ಎಸ್.ಟಿ.) ಸಿ.ಸಿ. ನಂ.3/2006 ಧಾರವಾಡ ಜಿಲ್ಲಾ ನ್ಯಾಯಾಲಯದಲ್ಲಿ ದಿನಾಂಕ:23.01.2008 ರಂದು ಅಂತಿಮ ತೀರ್ಪಿನಲ್ಲಿ ಜೀವಾವಧಿ ಶಿಕ್ಷೆ ನೀಡಿ ಆದೇಶವಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 103ನ್ನು ಉಲ್ಲಂಘಿಸಿದ್ದು, ಕೆಳಗೆ ಸಹಿ ಮಾಡಿದ ನಾನು ಭಾಸ್ಕರ ವಿಷ್ಣು ಭಟ್ಟ ಉಪನಿರ್ದೇಶಕರು (ಆಡಳಿತ),/ಶಿಸ್ತು ಪ್ರಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇದೇ

ನಿಯಮಗಳ ನಿಯಮ 8(VIII)ರ ಅಡಿ ಶ್ರೀಮತಿ ಸಾವಿತ್ರಿ ಕೋಂ ಲಕ್ಷ್ಮಣ ಭಜಂತ್ರಿ ಉರ್ಫ್ ಜಾಲಿಮರದ ಅಮಾನತ್ತ ಸಶಿ ಸಹಿಪ್ರಾ ಶಾಲೆ ಬೆಣಚಿ ತಾ:ಜಿ:ಧಾರವಾಡ ಇವರನ್ನು ನ್ಯಾಯಾಂಗ ಬಂಧನದಲ್ಲಿರಿಸಿದ ದಿನಾಂಕ:10.12.2005 ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಈ ಮೂಲಕ ಆದೇಶಿಸಲಾಗಿದೆ.

**ಭಾಸ್ಕರ ವಿಷ್ಣು ಭಟ್ಟ**

ಪಿ.ಆರ್.492

ಉಪನಿರ್ದೇಶಕರು (ಆಡಳಿತ)/ ಶಿಸ್ತು
ಪ್ರಾಧಿಕಾರಿಗಳು,
ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:04/2008–09, ದಿನಾಂಕ:4ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು–2,<br>ನಂಜನಗೂಡು ವಲಯ, ನಂಜನಗೂಡು. | | ಆರೋಪಿ ಪರಾರಿಯಾಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 08.07.2008ರಂದು ರಾತ್ರಿ 7.30 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, ನಂಜನಗೂಡು ವಲಯ, ನಂಜನಗೂಡು ಇವರು ನಂಜನಗೂಡು ತಾಲ್ಲೂಕು, ಬಿಳಿಗೆರೆ ಹೋಬಳಿ, ಸುತ್ತೂರು–ಹೊಸಕೋಟೆ ರಸ್ತೆ, ಆಲತ್ತೂರು ಸರ್ಕಲ್ ಬಳಿ ಕೆಎ–09/ಕ್ಯೂ–5977 ನೋಂದಣಿ ಸಂಖ್ಯೆಯ ಟಿವಿಎಸ್–50 ವಾಹನದಲ್ಲಿ ಅಕ್ರಮವಾಗಿ 17.280 ಲೀ.ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಮಾಡಿ, ಪ್ರಕರಣ ಸಂಖ್ಯೆ:01/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ನಿಯಮ 11, 13(1)(ಎ), 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯಿದೆ ನಿಯಮ 32, 34, 38(ಎ)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿ ಪರಾರಿಯಾಗಿರುವುದಾಗಿ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:02.09.2008 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ:05.11.2008ರಂದು ಮತ್ತೊಮ್ಮೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಪ್ರಕರಣದ ಪೂರ್ಣ ದಾಖಲಾತಿಗಳನ್ನು ಮತ್ತು ಸದರಿ ವಾಹನದ 'ಬಿ' ವಹಿಯ ಪ್ರತಿಯನ್ನು ಪಡೆದು, ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಎಂ.ಎನ್. ರಾಮು ಬಿನ್ ನಂಜಪ್ಪ, ನಂ.4461, 7ನೇ ಕ್ರಾಸ್, ಸೆಂಟ್ ಮೇರೀಸ್ ರಸ್ತೆ, ಎನ್.ಆರ್. ಮೊಹಲ್ಲಾ, ಮೈಸೂರು ಇವರ ಒಡೆತನದಲ್ಲಿದ್ದು, ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:29.11.2008 ರಂದು ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಸದರಿ ನೋಟಿಸ್‌ನ್ನು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು ದಿನಾಂಕ:20.01.2009 ರಂದು ಜಾರಿಗೊಳಿಸಿ, ಅಗತ್ಯ ಸ್ವೀಕೃತಿ ಪಡೆದು, ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ. ಎಂ.ಎನ್. ರಾಮು ಇವರು ದಿನಾಂಕ:23.01.2009 ರಂದು ಅರ್ಜಿಯನ್ನು ಸಲ್ಲಿಸಿ, ನಕಲಿ ಮದ್ಯಕ್ಕೂ ಈ ವಾಹನಕ್ಕೂ ಯಾವುದೇ ಸಂಬಂಧ ಇರುವುದಿಲ್ಲವೆಂದು ವಾಹನವನ್ನು ಮಾರಾಟ (Delivery Note) ಮಾಡಿರುವ ಬಗ್ಗೆ ಅಗತ್ಯ ದಾಖಲೆಯನ್ನು ಹಾಜರುಪಡಿಸಿರುತ್ತಾರೆ. ಅದರಂತೆ ಕುಮಾರ್‌ನಾಯ್ಕ್ ಬಿನ್ ಕುಳ್ಳೇನಾಯಕ, ನಂ.2551, 3ನೇ ಕ್ರಾಸ್, ಕಾಳಿದಾಸ ರಸ್ತೆ, ಮೈಸೂರು ಇವರಿಗೂ ಸಹ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ದಿನಾಂಕ:26.05.2009ರಂದು ಜಾರಿಗೊಳಿಸಲಾಗಿರುತ್ತದೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾದಕ ದ್ರವ್ಯಗಳ ಪೈಕಿ ಮಾದರಿ ತೆಗೆಯಲಾಗದ ಮದ್ಯವನ್ನು ಕೇಂದ್ರ ರಾಸಾಯನಿಕ ಪ್ರಾಯೋಗಾಲಯಕ್ಕೆ ಒಳಪಡಿಸಿ, ದಿನಾಂಕ:11.08.2008ರ ವರದಿಯಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು, ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತವೆಂದು ದೃಢಪಡಿಸಿರುತ್ತಾರೆ. ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ, ಮಾರಾಟ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಕೊಂಡು, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟುಮಾಡುವುದಲ್ಲದೇ, ಸರ್ಕಾರದ ಉದ್ದೇಶವನ್ನು ವಿಫಲಗೊಳಿಸುವಲ್ಲಿ ಕಾರ್ಯಪ್ರವೃತ್ತವಾಗಿರುವುದು ಕಂಡುಬಂದಿರುತ್ತದೆ.

ಕಡತ ಪರಿಶೀಲಿಸಲಾಯಿತು. ದಿನಾಂಕ:08.07.2008ರಂದು ನಂಜನಗೂಡು ತಾಲ್ಲೂಕು, ಬಿಳಿಗೆರೆ ಹೋಬಳಿ, ಸುತ್ತೂರು–ಹೊಸಕೋಟೆ ರಸ್ತೆ, ಆಲತ್ತೂರು ಸರ್ಕಲ್ ಬಳಿ ಕೆಎ–09/ಕ್ಯೂ–5977 ನೋಂದಣಿ ಸಂಖ್ಯೆಯ ಟಿವಿಎಸ್–50 ವಾಹನದಲ್ಲಿ ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ತಲೆ ಮರೆಸಿಕೊಂಡಿರುತ್ತಾನೆ. 'ಬಿ' ವಹಿರನ್ವಯ ಸದರಿ ವಾಹನ ಮಾಲೀಕರಾದ ಎಂ.ಎನ್. ರಾಮು, ಕುಮಾರ್‌ನಾಯ್ಕ್ ಇವರುಗಳಿಗೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಲಾಗಿದ್ದರೂ ಸಹ ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ/ ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಯು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (10) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (10) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:04/2008–09, ದಿನಾಂಕ:4ನೇ ಜೂನ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು–2, ನಂಜನಗೂಡು ವಲಯ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:01/2008–09, ದಿನಾಂಕ:08.07.2008ರಂದು ವಶಪಡಿಸಿಕೊಂಡ ಕೆಎ–09/ಕ್ಯೂ–5977 ನೋಂದಣಿ ಸಂಖ್ಯೆಯ ಟಿವಿಎಸ್–50 ವಾಹನ ಮತ್ತು 17.280 ಲೀ. ನಕಲಿ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜೂನ್ ತಿಂಗಳ 4ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–608

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:196(ಪೊಲೀಸ್)/2009-10, ದಿನಾಂಕ:8ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಜಿಲ್ಲೆ. | | ಗುರು ಬಿನ್ ಲಿಂಗಯ್ಯ, ಲೋಕೇಶ್ ಬಿನ್ ಶಿವಲಿಂಗೇಗೌಡ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:12.06.2009ರಂದು ಸಂಜೆ 5.30 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಜಿಲ್ಲೆ ಇವರು ಕೆ.ಆರ್.ನಗರ ತಾಲ್ಲೂಕು, ಗರುಡಗಂಬದ ವೃತ್ತ, ಹೊಳೆನರಸೀಪುರ ರಸ್ತೆಯಲ್ಲಿ ಅಕ್ರಮವಾಗಿ 457.920 ಲೀ. ಮದ್ಯವನ್ನು ಕೆಎ-05-/ಬಿ-2486 ನೋಂದಣಿ ಸಂಖ್ಯೆಯ ಅಂಬಾಸಿಡರ್ ಕಾರ್ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:12/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಗಳನ್ನು ದಸ್ತಗಿರಿ ಮಾಡಿ, ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:15.06.2009ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:18.06.2009ರಂದು ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ದಕ್ಷಿಣ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:17.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:12.04.2009ರಂದು ಕೆ.ಆರ್.ನಗರ ತಾಲ್ಲೂಕು, ಗರುಡಗಂಬದ ವೃತ್ತ, ಹೊಳೆನರಸೀಪುರ ರಸ್ತೆಯಲ್ಲಿ ಅಕ್ರಮವಾಗಿ 457.920 ಲೀ.ಮದ್ಯವನ್ನು ಕೆಎ-05/ಬಿ-2486 ನೋಂದಣಿ ಸಂಖ್ಯೆಯ ಅಂಬಾಸಿಡರ್ ಕಾರ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ, ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:196(ಪೊಲೀಸ್)/2009–10, ದಿನಾಂಕ:8ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕರ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:12/2009, ದಿನಾಂಕ:12.06.2009 ರಂದು ವಶಪಡಿಸಿಕೊಂಡ ಕೆಎ–05–/ಬಿ–2486 ನೋಂದಣಿ ಸಂಖ್ಯೆಯ ಅಂಬಾಸಿಡರ್ ಕಾರ್ ವಾಹನವನ್ನು (457.920 ಲೀ. ಮದ್ಯವನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 8ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1166

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:26(ಪೊಲೀಸ್)/2009–10, ದಿನಾಂಕ:15ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ನಗರ. | | ಶಿವಕುಮಾರ್ ಬಿನ್ ರಾಮಯ್ಯ ಬಿಡದಿ ಹೋ: ರಾಮನಗರ ಜಿಲ್ಲೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:22.07.2009ರಂದು ಮಧ್ಯಾಹ್ನ 12.45 ಗಂಟೆ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ನಗರ ಇವರು ಮೈಸೂರು ನಗರ, ಉದಯಗಿರಿ–ಮಹದೇವಪುರ ರಸ್ತೆ, ಸಾತಗಳ್ಳಿ ಕೆ.ಎಸ್.ಆರ್.ಟಿ.ಸಿ. ಬಸ್ ಡಿಪೋ ಮುಂಭಾಗದಲ್ಲಿ ಅಕ್ರಮವಾಗಿ 32.400 ಲೀ. ಮದ್ಯ ಮತ್ತು 3.300 ಲೀ. ಬಿಯರ್‌ನ್ನು ಕೆಎ–09/ಇಕೆ–8400 ನೋಂದಣಿ ಸಂಖ್ಯೆಯ ಟಿವಿಎಸ್ ಸ್ಕೂಟಿ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:05/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಯನ್ನು ದಸ್ತಗಿರಿ ಮಾಡಿ ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:23.07.2009ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:28.07.2009ರಂದು ಮೈಸೂರು ವಲಯ–2 ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:24.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:22.07.2009ರಂದು ಮೈಸೂರು ನಗರ, ಉದಯಗಿರಿ–ಮಹದೇವಪುರ ರಸ್ತೆ, ಸಾತಗಳ್ಳಿ ಕೆ.ಎಸ್.ಆರ್.ಟಿ.ಸಿ. ಬಸ್ ಡಿಪೋ ಮುಂಭಾಗದಲ್ಲಿ ಅಕ್ರಮವಾಗಿ 32.400 ಲೀ. ಮದ್ಯ ಮತ್ತು 3.300 ಲೀ. ಬಿಯರ್‌ನ್ನು ಕೆಎ–09/ಇಕೆ–8400 ನೋಂದಣಿ ಸಂಖ್ಯೆಯ ಟಿವಿಎಸ್ ಸ್ಕೂಟಿ ವಾಹನದಲ್ಲಿ

ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:26(ಪೊಲೀಸ್)/2009–10, ದಿನಾಂಕ:15ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕರ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ನಗರ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:05/2009, ದಿನಾಂಕ:22.07.2009 ರಂದು ವಶಪಡಿಸಿಕೊಂಡ ಕೆಎ–09–/ಇಕೆ–8400 ನೋಂದಣಿ ಸಂಖ್ಯೆಯ ಟಿವಿಎಸ್ ಸ್ಕೂಟಿ ವಾಹನವನ್ನು (32.400 ಲೀ. ಮದ್ಯ ಮತ್ತು 3.300 ಲೀ. ಬಿಯರ್‌ನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 15ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1167

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:04(ಪೊಲೀಸ್)/2009–10, ದಿನಾಂಕ:15ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ. | | ಗೋವಿಂದ ಬಿನ್ ಪುಟ್ಟಓಬಳೇಗೌಡ, ಗೊದ್ದನಪುರ, ನಂಜನಗೂಡು ತಾ: |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:29.06.2009ರಂದು ರಾತ್ರಿ 10.30 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರು ಗೊದ್ದನಪುರ–ಬ್ಯಾತನಳ್ಳಿಗೆ ಹೋಗುವ ಕೂಡು

ರಸ್ತೆ, ಟಾಟಾ ಮೈನ್ಸ್, ದೊಡ್ಡಕಾನ್ಯ, ಮೈಸೂರು ತಾ: ಬಳಿ ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ಸಿಎಜೆಡ್–1363 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 20/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:01.07.2009ರಂದು ವರದಿಯೊಂದನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:13.07.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ಕೇಂದ್ರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:24.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:29.06.2009ರಂದು ಗೊದ್ದನಪುರ–ಬ್ಯಾತನಳ್ಳಿಗೆ ಹೋಗುವ ಕೂಡು ರಸ್ತೆ, ಟಾಟಾ ಮೈನ್ಸ್, ದೊಡ್ಡಕಾನ್ಯ, ಮೈಸೂರು ತಾ: ಬಳಿ ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ಸಿಎಜೆಡ್–1363 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:04(ಪೊಲೀಸ್)/2009–10, ದಿನಾಂಕ:15ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕರ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:20/2009, ದಿನಾಂಕ:29.06.2009 ರಂದು ವಶಪಡಿಸಿಕೊಂಡ ಸಿಎಜೆಡ್–1363 ನೋಂದಣಿ ಸಂಖ್ಯೆಯ ಹೀರೋ ಹೋಂಡಾ ವಾಹನವನ್ನು (17.280 ಲೀ. ಮದ್ಯವನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 15ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1168

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:197(ಪೊಲೀಸ್)/2009–10, ದಿನಾಂಕ:8ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, | | ಮಾದನಾಯ್ಕ ಬಿನ್ ಮಾದನಾಯ್ಕ, |
| ಕೆ.ಆರ್.ನಗರ ಪೊಲೀಸ್ ಠಾಣೆ, | | ಹೊಸೂರುಕಲ್ಲಹಳ್ಳಿ, ಕೆ.ಆರ್.ನಗರ. |
| ಕೆ.ಆರ್.ನಗರ ತಾಲ್ಲೂಕು. | | |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.05.2009ರಂದು ಬೆಳಿಗ್ಗೆ 10.30 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್.ನಗರ ಪೊಲೀಸ್ ಠಾಣೆ ಇವರು ಕೆ.ಆರ್.ನಗರ ತಾಲ್ಲೂಕು, ಕಗ್ಗೇರಿ ಗ್ರಾಮದ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಂಭಾಗದಲ್ಲಿ ಅಕ್ರಮವಾಗಿ 18 ಲೀ. ಮದ್ಯವನ್ನು ಕೆಎ–0/ವಿ–9334 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:134/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಯನ್ನು ದಸ್ತಗಿರಿ ಮಾಡಿ, ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:19.06.2009ರಂದು ವರದಿಯೊಂದನ್ನು ಸಲ್ಲಿಸಿ, ಮುಂದಿನ ಕ್ರಮಕ್ಕಾಗಿ + ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:24.06.2009ರಂದು ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ದಕ್ಷಿಣ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:17.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:10.05.2009ರಂದು ಕೆ.ಆರ್.ನಗರ ತಾಲ್ಲೂಕು, ಕಗ್ಗೇರಿ ಗ್ರಾಮದ ರಸ್ತೆಯ ಬಳಿ ಅಕ್ರಮವಾಗಿ 18 ಲೀ. ಮದ್ಯವನ್ನು ಕೆಎ–0/ವಿ–9334 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (4) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:197(ಪೊಲೀಸ್)/2009–10, ದಿನಾಂಕ:8ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕರ ಉಪ ನಿರೀಕ್ಷಕರು, ಕೆ.ಆರ್.ನಗರ ಪೊಲೀಸ್ ಠಾಣೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:134/2009, ದಿನಾಂಕ:10.05.2009 ರಂದು ವಶಪಡಿಸಿಕೊಂಡ ಕೆಎ–0/ಎನ್–9334 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ವಾಹನವನ್ನು (18 ಲೀ. ಮದ್ಯವನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 8ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1169

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:198(ಪೊಲೀಸ್)/2009–10, ದಿನಾಂಕ:15ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಕೆ.ಆರ್.ನಗರ ಪೊಲೀಸ್ ಠಾಣೆ,<br>ಕೆ.ಆರ್.ನಗರ ತಾಲ್ಲೂಕು. | | ಕುಮಾರ್ ಬಿನ್ ಲೇ: ಮಲ್ಲೇಗೌಡ,<br>ಗಂಧನಹಳ್ಳಿ, ಕೆ.ಆರ್.ನಗರ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:12.04.2009ರಂದು ಮಧ್ಯಾಹ್ನ 3.00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್.ನಗರ ಪೊಲೀಸ್ ಠಾಣೆ ಇವರು ಕೆ.ಆರ್.ನಗರ ತಾಲ್ಲೂಕು, ಮಂಚನಹಳ್ಳಿ ಗ್ರಾಮ, ಮಂಚನಹಳ್ಳಿ–ಗಂಧನಹಳ್ಳಿ ರಸ್ತೆಯ ಬಳಿ ಅಕ್ರಮವಾಗಿ 5.760 ಲೀ. ಮದ್ಯವನ್ನು ಕೆಎ–05–/ಆರ್–8554 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:108/ 2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಯನ್ನು ದಸ್ತಗಿರಿ ಮಾಡಿ, ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:19.06.2009ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:24.06.2009ರಂದು ಕೆ.ಆರ್.ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ದಕ್ಷಿಣ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:17.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:12.04.2009ರಂದು ಕೆ.ಆರ್.ನಗರ ತಾಲ್ಲೂಕು, ಮಂಚನಹಳ್ಳಿ ಗ್ರಾಮ, ಮಂಚನಹಳ್ಳಿ–ಗಂಧನಹಳ್ಳಿ ರಸ್ತೆಯ ಬಳಿ ಅಕ್ರಮವಾಗಿ 5.760 ಲೀ. ಮದ್ಯವನ್ನು ಕೆಎ–05/ಆರ್–8554 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:198(ಪೊಲೀಸ್)/2009–10, ದಿನಾಂಕ:15ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕರ ನಿರೀಕ್ಷಕರು, ಕೆ.ಆರ್.ನಗರ ಪೊಲೀಸ್ ಠಾಣೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:108/2009, ದಿನಾಂಕ:12.04.2009 ರಂದು ವಶಪಡಿಸಿಕೊಂಡ ಕೆಎ–05/ಆರ್–8554 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನವನ್ನು (5.760 ಲೀ. ಮದ್ಯವನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 15ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1170

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:23/2008–09, ದಿನಾಂಕ:4ನೇ ಜೂನ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು,<br>ನಂಜನಗೂಡು ವಲಯ, ನಂಜನಗೂಡು. | | ನಾಗರಾಜು ಬಿನ್ ಶಿವಣ್ಣ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:23.07.2008ರಂದು ಸಂಜೆ 5.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು ಇವರು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಹುಲ್ಲಹಳ್ಳಿ–ಹುರಾ ಮುಖ್ಯ ರಸ್ತೆಯ ಮಲ್ಕುಂಡಿ ಬಸ್ ನಿಲ್ದಾಣದ ಬಳಿ ಅಕ್ರಮವಾಗಿ 7.200 ಲೀ. ನಕಲಿ ಮದ್ಯವನ್ನು ಕೆಎ–09/ಆರ್–5695 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸ್‌ಎಲ್ ಸೂಪರ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:03/2008–09ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13 (1)(ಎ) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 34, 38(ಎ) ಮತ್ತು 43ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಯನ್ನು ದಸ್ತಗಿರಿ ಮಾಡಿ, ನ್ಯಾಯಾಂಗ ಬಂಧನಕ್ಕೆ ಹಾಜರುಪಡಿಸಿರುವುದಾಗಿ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ನಂಜನಗೂಡು ವಲಯದ ಅಬಕಾರಿ ಉಪ ನಿರೀಕ್ಷಕರು, ದಿನಾಂಕ:30.07.2008ರ ಪತ್ರದಲ್ಲಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಮಾಡಿರುತ್ತಾರೆ. ಹಾಗೆಯೇ ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:02.09.2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ, ದಿನಾಂಕ:05.11.2008ರಂದು ಮತ್ತೊಮ್ಮೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು, ಸದರಿ ವಾಹನದ 'ಬಿ' ವಹಿಯ ಪ್ರತಿಯನ್ನು ಪಡೆದು, ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ಎನ್.ಲಕ್ಷ್ಮೀಕಾಂತ್ ರಾವ್ ಬಿನ್ ಹೆಚ್.ಪಿ. ನಾಗರಾಜರಾವ್, ನಂ.742, ಶ್ರೀನಿವಾಸ ನಿಲಯ, 24ನೇ ಕ್ರಾಸ್, 4ನೇ ಮೈನ್, ವಿದ್ಯಾರಣ್ಯಪುರಂ, ಮೈಸೂರು ಇವರ ಮಾಲೀಕತ್ವದಲ್ಲಿರುವುದು ಕಂಡುಬಂದಿರುತ್ತದೆ. ಸದರಿಯವರಿಗೆ ಈ ಪ್ರಾಧಿಕಾರದಿಂದ ದಿನಾಂಕ:29.11.2008ರಂದು ವಾಹನ ಮತ್ತು ನಕಲಿ ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸಿಗೆ ಪ್ರತಿಕ್ರಿಯಿಸಿ, ಮೇಲ್ಕಂಡ ವಾಹನವನ್ನು ದೊರೆಸ್ವಾಮಿ ಬಿನ್ ಶಿವಪ್ಪ, ಮೆಲ್ಲಹಳ್ಳಿ ಗ್ರಾಮ, ಹುಲ್ಲಹಳ್ಳಿ ಹೋಬಳಿ, ಹುರಾ ಅಂಚೆ, ನಂಜನಗೂಡು ತಾಲ್ಲೂಕು, ಇವರಿಗೆ ಖರೀದಿಗೆ ನೀಡಿರುವುದಾಗಿ, ದಿನಾಂಕ:12.01.2009ರಂದು ಲಿಖಿತ ಮೂಲಕ ತಿಳಿಸಿರುತ್ತಾರೆ. ಅಂತೆಯೇ ಇವರಿಗೂ ಸಹ ದಿನಾಂಕ:23.04.2009ರಂದು ಕಲಂ 43(ಬಿ)ರ ಅಡಿಯಲ್ಲಿ ನೀಡಲಾದ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ದೊರೆಸ್ವಾಮಿ ಇವರು ಇದಕ್ಕೆ ಪ್ರತಿಕ್ರಿಯಿಸಿ, ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ನನ್ನ ಯಾವುದೇ ಅಭ್ಯಂತರವಿಲ್ಲವೆಂದು ಲಿಖಿತ ಮೂಲಕ ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾದಕ ದ್ರವ್ಯಗಳ ಪೈಕಿ ಮಾದರಿ ತೆಗೆಯಲಾಗದ ಮದ್ಯವನ್ನು ಕೇಂದ್ರ ರಾಸಾಯನಿಕ ಪ್ರಾಯೋಗಾಲಯಕ್ಕೆ ಒಳಪಡಿಸಿ, ದಿನಾಂಕ:11.08.2008ರ ವರದಿಯಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು, ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತವೆಂದು ದೃಢಪಡಿಸಿರುತ್ತಾರೆ. ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಸಾಗಾಣಿಕೆ, ಮಾರಾಟ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿಕೊಂಡು, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟುಮಾಡುವುದಲ್ಲದೇ, ಸರ್ಕಾರದ ಉದ್ದೇಶವನ್ನು ವಿಫಲಗೊಳಿಸುವಲ್ಲಿ ಕಾರ್ಯಪ್ರವೃತ್ತರಾಗಿರುವುದು ಕಂಡುಬಂದಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:23.07.2008ರಂದು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಹುಲ್ಲಹಳ್ಳಿ–ಹುರ ಮುಖ್ಯರಸ್ತೆಯ ಮಲ್ಕುಂಡಿ ಬಸ್ ನಿಲ್ದಾಣದ ಬಳಿ ಅಕ್ರಮವಾಗಿ 7.200 ಲೀ.ನಕಲಿ ಮದ್ಯವನ್ನು ಕೆಎ–09/ಆರ್–5695 ನೋಂದಣಿ ಸಂಖ್ಯೆ ಟಿವಿಎಸ್ ಎಕ್ಸ್‌ಎಲ್ ಸೂಪರ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ನಾಗರಾಜ ಬಿನ್ ಶಿವಣ್ಣ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ಅಲ್ಲದೇ ದೊರೆಸ್ವಾಮಿ ಮತ್ತು ಇವರಿಗೆ ಈ ಪ್ರಾಧಿಕಾರದಿಂದ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್ ನೀಡಲಾಗಿದ್ದು, ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (10) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:23/2008–09, ದಿನಾಂಕ:4ನೇ ಜೂನ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ನಂಜನಗೂಡು ವಲಯ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:03/2008–09, ದಿನಾಂಕ:23.07.2008 ರಂದು ವಶಪಡಿಸಿಕೊಂಡ ಕೆಎ–09/ಆರ್–5695 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸ್‌ಎಲ್ ಸೂಪರ್ ವಾಹನ ಮತ್ತು 7.200 ಲೀ. ನಕಲಿ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜೂನ್ ತಿಂಗಳ 4ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–600

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:71(ಪೊಲೀಸ್)/2008–09, ದಿನಾಂಕ:22ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಅ.ಜಾ. ಮತ್ತು ಲಾ.ನಿ.ದ. ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ. | | ಮಹದೇವು ಅ ಕುಂಡ ಬಿನ್ ನಿಂಗಶೆಟ್ಟಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:31.08.2009ರಂದು ಮಧ್ಯಾಹ್ನ 3.30 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಅ.ಜಾ. ಮತ್ತು ಲಾ.ನಿ.ದ. ವಿಶೇಷ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರು ನಂಜನಗೂಡು ತಾಲ್ಲೂಕು, ಬಸವನಪುರ ಗೇಟ್ ಬಳಿ ಹತ್ತಿರ ಅಕ್ರಮವಾಗಿ 10.800 ಲೀ. ಮದ್ಯವನ್ನು ಕೆಎ–09/ಇಬಿ–186 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:30/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಗಳನ್ನು ದಸ್ತಗಿರಿ ಮಾಡಿ, ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:10.09.2009ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:11.09.2009ರಂದು ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:24.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:31.08.2009ರಂದು ನಂಜನಗೂಡು ತಾಲ್ಲೂಕು, ಬಸವನಪುರ ಗೇಟ್ ಬಳಿ ಹತ್ತಿರ ಅಕ್ರಮವಾಗಿ 10.800 ಲೀ. ಮದ್ಯವನ್ನು ಕೆಎ–09/ಇಬಿ–186 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಬಗ್ಗೆ ವಾಹನದ

ಮಾಲೀಕರು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (2) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:71(ಪೊಲೀಸ್)/2008–09, ದಿನಾಂಕ:22ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:30/2009, ದಿನಾಂಕ:31.08.2009 ರಂದು ವಶಪಡಿಸಿಕೊಂಡ ಕೆಎ–09/ಇಬಿ–186 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್ ಸೂಪರ್ ವಾಹನವನ್ನು (10.880 ಲೀ. ಮದ್ಯವನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 22ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1195

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:172(ಪೊಲೀಸ್)/2008–09, ದಿನಾಂಕ:22ನೇ ಅಕ್ಟೋಬರ್, 2009**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಹೆಚ್.ಡಿ.ಕೋಟೆ ಪೊಲೀಸ್ ಠಾಣೆ,<br>ಮೈಸೂರು ಜಿಲ್ಲೆ. | | ಎಂ.ಡಿ. ರಾಜು ಬಿನ್ ಕೆ.ದಾಸಪ್ಪ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:11.05.2009ರಂದು ರಾತ್ರಿ 11.00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಹೆಚ್.ಡಿ. ಕೋಟೆ ಪೊಲೀಸ್ ಠಾಣೆ, ಇವರು ಹೆಚ್.ಡಿ. ಕೋಟೆ ತಾಲ್ಲೂಕು, ನಾಗನಹಳ್ಳಿ ಗ್ರಾಮದ ಬಸ್ ನಿಲ್ದಾಣದ ಹತ್ತಿರ ಅಕ್ರಮವಾಗಿ 11.880 ಲೀ. ಮದ್ಯವನ್ನು ಕೆಎಲ್–11/ಜೆ–9914 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ:138/2009ರಲ್ಲಿ ಕರ್ನಾಟಕ

ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಆರೋಪಿಗಳನ್ನು ದಸ್ತಗಿರಿ ಮಾಡಿ, ಮೊಕದ್ದಮೆ ದಾಖಲಿಸಿ, ಪ್ರಥಮ ಮಾಹಿತಿ ವರದಿ ಮತ್ತು ಸಂಬಂಧಪಟ್ಟ ದಾಖಲಾತಿಗಳೊಂದಿಗೆ ದಿನಾಂಕ:11.06.2009ರಂದು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ದಿನಾಂಕ:12.06.2009ರಂದು ಹೆಚ್.ಡಿ. ಕೋಟೆ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಸಾರಿಗೆ ಆಯುಕ್ತರು, ತಿರುವನಂತಪುರಂ, ಕೇರಳ ಇವರಿಗೆ ದಿನಾಂಕ:17.09.2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:11.05.2009ರಂದು ಹೆಚ್.ಡಿ. ಕೋಟೆ ಪೊಲೀಸ್ ಠಾಣೆ, ಇವರು ಹೆಚ್.ಡಿ. ಕೋಟೆ ತಾಲ್ಲೂಕು, ನಾಗನಹಳ್ಳಿ ಗ್ರಾಮದ ಬಸ್ ನಿಲ್ದಾಣದ ಹತ್ತಿರ ಅಕ್ರಮವಾಗಿ 11.880 ಲೀ. ಮದ್ಯವನ್ನು ಕೆಎಲ್–11/ಜೆ–9914 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (5) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:172(ಪೊಲೀಸ್)/2008–09, ದಿನಾಂಕ:22ನೇ ಅಕ್ಟೋಬರ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ)(2)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:138/2009, ದಿನಾಂಕ:11.05.2009 ರಂದು ವಶಪಡಿಸಿಕೊಂಡ ಕೆಎಲ್–11/ಜೆ–9914 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನವನ್ನು (11.880 ಲೀ. ಮದ್ಯವನ್ನು ಮಾದರಿ ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಅಕ್ಟೋಬರ್ ತಿಂಗಳ 22ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು)

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್–1196